# ದಕ್ಷಿಣ ಕನ್ನಡ ಅಸ್ಪೃಶ್ಯತಾ ನಿವಾರಣಾ ಪ್ರಯತ್ನದಲ್ಲಿ ಕುದ್ಮುಲ್ ರಂಗರಾವ್‌ರವರ ಪಾತ್ರ.

ಕನ್ನಡ ವಿಶ್ವ ವಿದ್ಯಾನಿಲಯ ಹಂಪಿಯ ಚರಿತ್ರೆ ಅಧ್ಯಯನದ ಎಂ.ಫಿಲ್
ಪದವಿಗಾಗಿ ಅರ್ಪಿಸಿದ ನಿಬಂಧ

ಸಂಶೋಧಕರು

ರಘುರಾಜ್

ನೊಂದಣಿ ಸಂಖ್ಯೆ 15110703005б

ಮಾರ್ಗದರ್ಶಕರು

ಡಾ॥ ಡೆನ್ನಿಸ್ ಫೆರ್ನಾಂಡಿಸ್

2016



ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು - 575001

# ದಕ್ಷಿಣ ಕನ್ನಡ ಅಸ್ಪೃಶ್ಯತಾ ನಿವಾರಣಾ ಪ್ರಯತ್ನದಲ್ಲಿ ಕುದ್ಮುಲ್ ರಂಗರಾವ್‌ರವರ ಪಾತ್ರ.

ಕನ್ನಡ ವಿಶ್ವ ವಿದ್ಯಾನಿಲಯ ಹಂಪಿಯ ಚರಿತ್ರೆ ಅಧ್ಯಯನದ ಎಂ.ಫಿಲ್
ಪದವಿಗಾಗಿ ಅರ್ಪಿಸಿದ ನಿಬಂಧ



ಸಂಶೋಧಕರು

**ರಘುರಾಜ್**

ನೊಂದಣಿ ಸಂಖ್ಯೆ 151107030056

ಮಾರ್ಗದರ್ಶಕರು

ಡಾ|| ಡೆನ್ನಿಸ್ ಫೆರ್ನಾಂಡಿಸ್

2016

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು – 575001

# ಯೋಗ್ಯತಾ ಪತ್ರ

ರಘುರಾಜ್ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ "ದಕ್ಷಿಣ ಕನ್ನಡ ಅಸ್ಪೃಶ್ಯತಾ ನಿವಾರಣಾ ಪ್ರಯತ್ನದಲ್ಲಿ ಕುದ್ಮುಲ್ ರಂಗರಾವ್‌ರವರ ಪಾತ್ರ". ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ. ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿಧ್ಯಾನಿಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ-ಸ್ವರೂಪದವಾಗಿದೆ. ಇವರು ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ.

ಡಾ.ಡೆನ್ನಿಸ್ ಫೆರ್ನಾಂಡಿಸ್

ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ – ಮಂಗಳೂರು

<u>ಪ್ರಮಾಣ ಪತ್ರ</u>

ಹಂಪಿ ಕನ್ನಡ ವಿಶ್ವ ವಿದ್ಯಾನಿಲಯದ ಎಂ. ಫಿಲ್ ಪದವಿಗಾಗಿ ಸಾದರ ಪಡಿಸುವ "ದಕ್ಷಿಣ ಕನ್ನಡ ಅಸ್ಪೃಶ್ಯತಾ ನಿವಾರಣಾ ಪ್ರಯತ್ನದಲ್ಲಿ ಕುದ್ಮುಲ್ ರಂಗರಾವ್‌ರವರ ಪಾತ್ರ" ಎಂಬ ಶೀರ್ಷಿಕೆಯ ಈ ನಿಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಡೆನ್ನಿಸ್ ಫೆರ್ನಾಂಡಿಸ್ ಅವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ ಅಥವಾ ಆರ್ಥಿಕ ಲಾಭಕ್ಕಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ಧೃಢಪಡಿಸುತ್ತೇನೆ.

ರಘುರಾಜ್

ಸಂಶೋಧಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ – ಮಂಗಳೂರು

# ಅಧ್ಯಯನದ ವಿವರಗಳು

## ಅಧ್ಯಾಯ – 01

### ಕುದ್ಮುಲ್ ರಂಗರಾವ್‌ರವರ ಜೀವನ ಮತ್ತು ಪರಿಚಯ

- ಪೀಠಿಕೆ
- ರಂಗರಾಯರ ಬಾಲ್ಯದ ದಿನಗಳು
- ಬಡವರ ವಕೀಲರೆಂದು ಖ್ಯಾತಿ



ಪೂಜ್ಯನೀಯ ಕುದ್ಮುಲ್ ರಂಗರಾವ್

# ಕುದ್ಮುಲ್ ರಂಗರಾವ್ ರವರ ಜೀವನ ಮತ್ತು ಪರಿಚಯ

- **ಪೀಠಿಕೆ.**

ಕರ್ನಾಟಕದ ಕರಾವಳಿ ಪ್ರದೇಶ ವಿಶಿಷ್ಟವಾದದ್ದು. ಪೂರ್ವಕ್ಕೆ ಪಶ್ಚಿಮ ಘಟ್ಟಗಳು ಮತ್ತು ಪಶ್ಚಿಮಕ್ಕೆ ಅರಬ್ಬೀ ಸಮುದ್ರ ಇರುವ ಸುಮಾರು 4866 ಚದರ ಕಿಲೋಮೀಟರ್ ವ್ಯಾಪ್ತಿಯ ವಿಶಾಲ ಪ್ರದೇಶ. ಕರಾವಳಿ ಪ್ರದೇಶದಲ್ಲಿ ಸಾರಿಗೆ ಸೌಲಭ್ಯ, ಉದ್ಯೋಗ ಅವಕಾಶ ಮೂಲ ಸೌಕರ್ಯಗಳು ಹೆಚ್ಚಾಗಿರುವುದರಿಂದ ಜನಸಾಂದ್ರತೆಯೂ ಹೆಚ್ಚಾಗಿದೆ.

ಪ್ರಾಚೀನ ಕಾಲದಲ್ಲಿ ಗೋಕರ್ಣದಿಂದ ಚಂದ್ರಗಿರಿ ಹೊಳೆಯ ತನಕ ಇರುವ ಒಟ್ಟು ಪ್ರದೇಶ 'ತುಳುವ' ಎಂದೇ ಪ್ರಸಿದ್ಧವಾದದ್ದು ಇದು ಕರ್ನಾಟಕ ಪ್ರಾಂತ್ಯದ ಭಾಗವೇ ಆಗಿತ್ತು. ಕನ್ನಡ ಅರಸರೇ ತುಳುವ ಪ್ರದೇಶವನ್ನೂ ಆಳುತ್ತಿದ್ದರು.[1] ಸ್ಥಳೀಯವಾಗಿ ಪ್ರತ್ಯೇಕವಾದ ತುಳು ಭಾಷೆ ಇದ್ದರೂ ರಾಜಕೀಯ ಆಡಳಿತದ ಕಾರಣ ಕನ್ನಡ ಸಾಮಾಜಿಕ, ರಾಜಕೀಯ ಮತ್ತು ವಾಣಿಜ್ಯ ವ್ಯವಹಾರಗಳಲ್ಲಿ ಉಳಿದುಕೊಂಡಿದೆ. ಜೈನ ಅರಸರು ತುಳು ಭಾಷಿಕರಾಗಿದ್ದರೂ ಕನ್ನಡದ ಪ್ರಾಧಾನ್ಯಕ್ಕೆ ಧಕ್ಕೆಯಾಗಿರಲಿಲ್ಲ. ತುಳು ಜನರ ಮನೆಯ ಭಾಷೆಯಾಗಿ ತುಳು ಈ ಪ್ರದೇಶದಲ್ಲಿ ರೂಢಿಯಲ್ಲಿತ್ತು. ಕರಾವಳಿಯಲ್ಲಿ ಮೀನು ಹಿಡಿಯುವ ಬೆಸ್ತರೂ, ಅಲ್ಲಲ್ಲಿ ಬಯಲು, ಬಂಜರು ಭೂಮಿಗಳಿರುವಲ್ಲಿ ತಾಳೆ ಮರಗಳಿಂದ ಹೆಂಡ ಇಳಿಸುವ ಮೂರ್ತೆದಾರರೂ, ಸಣ್ಣ ಪುಟ್ಟ ಅರಸರಂತೆ ಇದ್ದ ಬಂಟ ಜಮೀನ್ದಾರರೂ, ಕಾಡುಗುಡ್ಡಗಳಲ್ಲಿ ಆದಿ ಮೂಲನಿವಾಸಿಗಳೂ ವಾಸ ಮಾಡಿಕೊಂಡಿದ್ದರು ಎಂಬುದು ಕರಾವಳಿ ಪ್ರದೇಶದ ಕುರಿತಾಗಿ ಇತಿಹಾಸತಜ್ಞರು ಕಂಡಿರುವ ಸ್ಥೂಲ ಸಂಗತಿಗಳು.

ಕರ್ನಾಟಕದಲ್ಲಿ ಬ್ರಿಟಿಷರ ನೇರವಾದ ಆಳ್ವಿಗೆ ಒಳಗಾದ ಮೊಟ್ಟ ಮೊದಲ ಪ್ರದೇಶ ಕೆನರಾ ಎಂದು ಬ್ರಿಟಿಷರಿಂದ ಕರೆಯಲಾಗಿದ್ದ ಕರಾವಳಿ ಪ್ರದೇಶ. ಅದು 1799 ರಲ್ಲಿ ನಾಲ್ಕನೇ ಮೈಸೂರು ಯುದ್ಧದಲ್ಲಿ ಬ್ರಿಟಿಷರಿಗೆ ಗೆಲುವು ದೊರೆತಾಗ ಸಿಕ್ಕಿದ್ದು ಕೆನರಾ. ಎಂದರೆ ಈಗಿನ ಕಾಸರಗೋಡು,

ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಒಳಗೊಂಡ ಒಟ್ಟು ಕರಾವಳಿ ಪ್ರದೇಶ ಕೆನರಾ ಪ್ರದೇಶ ಮತ್ತೆ 1862ರಲ್ಲಿ ವಿಭಜನೆಯಾಯಿತು.

ಉತ್ತರ ಕನ್ನಡ ಜಿಲ್ಲೆ ಮುಂಬೈ ಪ್ರಾಂತ್ಯಕ್ಕೆ ಸೇರಿತು. ಉಡುಪಿಯೂ ಸೇರಿದಂತೆ ದಕ್ಷಿಣ ಕನ್ನಡ ಜಿಲ್ಲೆ ಪೂರ್ವ ಕರಾವಳಿ ತೀರದಲ್ಲಿ ಆಡಳಿತ ಕೇಂದ್ರವಿದ್ದ ಮದ್ರಾಸ್ ಆಧಿಪತ್ಯಕ್ಕೆ ಒಳಪಟ್ಟಿತು.

ಬ್ರಿಟಿಷರ ನೇರ ಆಡಳಿತ ಇದ್ದ ಈ ಪ್ರದೇಶಗಳಲ್ಲಿ ಹೊಸಬಗೆಯ ರಾಜ್ಯಭಾರ ಕ್ರಮ ಆರಂಭವಾಯಿತು. ಆದುವರೆಗೆ ಇದ್ದುದು ಸ್ಥಳೀಯ ಅರಸರ ನಿರಂಕುಶಾಧಿಕಾರ, ಅರಸ, ಮಂತ್ರಿ ಸೇನಾಧಿಕಾರಿ, ಅಸ್ಥಾನಪಂಡಿತ ಇವರಿಂದ ಕೂಡಿದ ರಾಜನ ದರಬಾರು, ಆಸ್ಥಾನ ಪಂಡಿತರು ಹೇಳಿದ್ದೇ ರಾಜ ಧರ್ಮ, ತಮ್ಮ ಹಾಗೂ ಅರಸರ ಹಿತಕ್ಕೆ ಮಾರಕವಾದುದೇನನ್ನೂ ಅವರು ಹೇಳುತ್ತಿರಲಿಲ್ಲ. ಬ್ರಿಟಿಷರ ನೇರ ಆಡಳಿತ ಈ ಬಗೆಯ ಮಧ್ಯಯುಗದ ಪಾಳೇಗಾರಿಕೆಯನ್ನು ಕೊನೆಗೊಳಿಸಿತು.

ಈ ಅಧ್ಯಾಯದಲ್ಲಿ ಹಲವಾರು ಕೃತಿ ಸಂಶೋಧನೆಗಳು ಒಳಗೊಂಡಿದ್ದು ದಲಿತ ಪರಿಕಲ್ಪನೆಯ ನೆಲೆಯಲ್ಲಿ ನಡೆಸಿದ ವಿಶ್ಲೇಷಣೆಯಾಗಿದೆ. ಪಿ.ಕಮಲಾಕ್ಷರವರು ಬರೆದ "ದಲಿತೋದ್ಧಾರಕ ಕುದ್ಮುಲ್ ರಂಗರಾಯರು" ಎಂಬ ಕೃತಿಯು ಪ್ರಥಮ ಮತ್ತು ಮಹತ್ವ ಪೂರ್ಣವಾದ ರಂಗರಾಯರ ಕುರಿತ ಅಧ್ಯಯನ ಗ್ರಂಥವಾಗಿದೆ. 18ನೇ ಶತಮಾನದ ಕೊನೆಯ ಹಂತದಲ್ಲಿ ಮತ್ತು 19ನೇ ಶತಮಾನದ ಪ್ರಾರಂಭದ ಹಂತದಲ್ಲಿ ಕೈಗೊಂಡ ರಂಗರಾಯರ ಅಸ್ಪ್ರಶ್ಯತಾ ನಿವಾರಣಾ ಪ್ರಯತ್ನಗಳು ಮತ್ತು ಆ ಮೂಲಕ ಶೋಷಣೆಗೊಳಗಾದ ಜನರ ಸುಧಾರಣಾ ಹಂತಗಳು ಅಡಕವಾಗಿದೆ. ಈ ಅಧ್ಯಾಯದಲ್ಲಿ ವಿಶೇಷವಾಗಿ ರಂಗರಾಯರ ಜೀವನ ಚರಿತ್ರೆ ಮತ್ತು ಅವರು ಕಂಡ ಶೋಷಣೆಯ ಸಮಾಜ ಮತ್ತು ಅವರ ಬಾಲ್ಯದ ಚರಿತ್ರೆಯನ್ನು ಪ್ರಸ್ತುತ ಪಡಿಸಲಾಗಿದೆ.ದಲಿತರ ಹೀನ ಪರಿಸ್ಥಿತಿಯನ್ನು,ಗುಲಾಮಗಿರಿ ಪದ್ಧತಿಯ ಕೆಲವೊಂದು ಧೋರಣೆಗಳನ್ನು ಗಮನಿಸಿದಾಗ ಪ್ರೊ.ಬಾರ್ಕೂರು ಉದಯ ಮತ್ತು ಡಾ.॥ ವಾಸುದೇವ ಬೆಳ್ಳೆ ಕೃತಿಗಳು ಬಹಳ

ಪರಿಣಾಮಕಾರಿಯಾಗಿವೆ. 19ನೇ ಶತಮಾನದ ತುಳುನಾಡಿನ ಗುಲಾಮಗಿರಿ ಪದ್ಧತಿ ಮತ್ತು ಅದರ ಸ್ಥಿತಿಗತಿಗಳು, ಗುಲಾಮಗಿರಿ ಪದ್ಧತಿಯ ಅಂಕಿಅಂಶಗಳು, ಸಹಜವಾಗಿ ದಲಿತರು ಅನುಭವಿಸುತ್ತಿದ್ದ ಶೋಷಣಾ ಸಮಾಜದ ಚಿತ್ರಣಗಳು, ಇದಕ್ಕೆ ಸರಿ ಸಮನಾಗಿ ಬೇರೆ ಬೇರೆ ಜಾತಿ ವ್ಯವಸ್ಥೆಯ ಕಟ್ಟು ಪಾಡುಗಳು,ಇವೆಲ್ಲವೂ ಅಡಕವಾಗಿದೆ. ಸಮಾಜದ ವಿವಿಧ ಮೇಲು ಜಾತಿಯ ಮತ್ತು ಕೆಳಸ್ತರದಲ್ಲಿದ್ದ ಅಸ್ಪ್ರಶ್ಯರ ಹೋಲಿಕೆಯನ್ನು ಸಂಗ್ರಹಿಸಿ ತಿಳಿಸಲಾಗಿದೆ. ಅಸ್ಪ್ರಶ್ಯರ ಕಸುಬಿನ ಬಗ್ಗೆ, ಅವರ ಕೃಷಿ ಚಟುವಟಿಕೆ, ಆರಾಧನಾ ವಿಧಾನ, ಮತ್ತು ಹಲವು ಕಟ್ಟು ಕಟ್ಟಳೆಗಳ ಬಗ್ಗೆ ಚರ್ಚಿಸಲಾಗಿದೆ. ಅದೇ ರೀತಿಯಲ್ಲಿ  ಲಕ್ಷ್ಮಣ್ ಕೊಡಸೆ ಬರೆದಿರುವ "ದಲಿತೋದ್ಧಾರದ ಗುರು ಕುದ್ಮುಲ್ ರಂಗರಾವ್' ಎಂಬ ಕೃತಿಯಲ್ಲಿ ವಿಶೇಷವಾಗಿ ದಲಿತರ ಏಳಿಗೆಗೆ ಹೋರಾಡಿದ ಜ್ಯೋತಿ ಬಾಪುಲೆ, ದಕ್ಷಿಣ ಕನ್ನಡದಲ್ಲಿ ಧಾರ್ಮಿಕ ಕ್ರಾಂತಿಗೈದ ,ಅಸ್ಪ್ರಶ್ಯರ ಉನ್ನತಿಗೆ ಕಾರಣರಾದ ನಾರಾಯಣ ಗುರುಗಳ ಸತ್ಯಾ ಸತ್ಯತೆಯ ಹೋರಾಟವನ್ನು ಹೋಲಿಸಲಾಗಿದೆ. ಮಾತ್ರವಲ್ಲ 3 ಬಾರಿ ಗಾಂಧೀಜಿಯವರ ಮಂಗಳೂರು ಭೇಟಿ ಮತ್ತು ಅವರು ರಂಗರಾಯರ ಅಸ್ಪ್ರಶ್ಯತಾ ನಿವಾರಣಾ ಕಾಯಕವನ್ನು ನೋಡಿ ಪ್ರಶಂಶಿಸಿದ ಬಗ್ಗೆ ವಿವರಿಸಲಾಗಿದೆ.

"ದಕ್ಷಿಣ ಕನ್ನಡದ ಹರಿಜನ ಮತ್ತು ಗಿರಿಜನ ಇತಿಹಾಸ"ದ ಕೃತಿಯಲ್ಲಿ ಪಿ.ಕಮಲಾಕ್ಷರವರು ಸವಿವರವಾಗಿ ಕೂಡು ಕಟ್ಟಳೆಯ ಎಲ್ಲಾ ದಲಿತರ ಜಾತಿ,ಉಪಜಾತಿ,ಕಸುಬು,ಆಚರಣೆ ಮತ್ತು ಅವರ ಸಾಮಾಜಿಕ ಬದುಕಿನ ಇತಿಹಾಸವನ್ನು ತಿಳಿಸಿದ್ದಾರೆ. ಅಖಿಲ ಭಾರತ ಮುಂಡಾಲ ಯುವ ವೇದಿಕೆ ಎಂಬ ಪರಿಶಿಷ್ಟ ಜಾತಿಯ ಸಂಘವು "ಅಮೃತ ಬಿಂದು" ಎಂಬ ರಂಗರಾಯರ ಕುರಿತ ಪುಸ್ತಕವೂ ರಂಗರಾಯರ ಮತ್ತು ಅಸ್ಪ್ರಶ್ಯರ ಬಾಂಧವ್ಯದ ಕುರಿತು ಸುಧೀರ್ಘವಾದ ಚರ್ಚೆಯೊಂದಿಗೆ ರಚಿತವಾಗಿದೆ. ಗಾಂಧೀಜಿಯವರ ಅಸ್ಪ್ರಶ್ಯತೆಯ ಕುರಿತ ಬೇರೆ ಬೇರೆ ವಾದ-ವಿವಾದಗಳ ಬಗ್ಗೆ ಪ್ರೊ.ಜಿ.ಡಿ.ನಾಡಕರ್ಣಿ ಯವರು "ಅಸ್ಪ್ರಶ್ಯತೆ" ಎಂಬ ಕೃತಿಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.ಮುಂಡಾಲ ಸಮುದಾಯ ಮತ್ತು ಬಂಟ ಸಮುದಾಯದ ಒಡನಾಟ, ಮುಂಡಾಲರ ಆರಾಧ್ಯ ದೈವವಾದ ಬಬ್ಬು ಸ್ವಾಮಿಯ ಧಾರ್ಮಿಕ ಹಿನ್ನಲೆಯನ್ನು ಇರಿಸಿ ಕೊಂಡು ಇಂದಿನ ಸಾಮಾಜಿಕ ಬದುಕಿನ

ಹೋಲಿಕೆಯನ್ನು ನವೀನ್ ಸುವರ್ಣ ಪಡ್ರೆಯವರ "ಶ್ರೀ ಬಬ್ಬು ಸ್ವಾಮಿ ಮತ್ತು ಶ್ರೀ ತನ್ನಿ ಮಾನಿಗ" ಪಾಡ್ದನ ಆಧಾರಿತ ಕೃತಿಯಲ್ಲಿ ಬಹಳ ಸ್ಪಷ್ಟವಾಗಿ ತಿಳಿಸಿದ್ದಾರೆ.

**ರಂಗರಾಯರ ಬಾಲ್ಯದ ದಿನಗಳು.**

ರಂಗರಾವ್ ಅವರು 1859 ರ ಜೂನ್ 29 ಕಾಸರಗೋಡು ಜಿಲ್ಲೆಯ ಕುದ್ಮುಲ್ ಎಂಬಲ್ಲಿ ದೇವಪ್ಪಯ್ಯ – ಗೌರಿ ದಂಪತಿಗಳ ಹಿರಿಯ ಮಗನಾಗಿ ಜನಿಸಿದರು. ದೇವಪ್ಪಯ್ಯ ಮುಸ್ಲಿಂ ಜಮೀನ್ದಾರರೊಬ್ಬರ ಬಳಿ ಗುಮಾಸ್ತೆಯಾಗಿದ್ದರು. ದೇವಪ್ಪಯ್ಯ ತುಂಬ ಸರಳ ವ್ಯಕ್ತಿ. ಧಾರ್ಮಿಕ ಪ್ರವೃತ್ತಿಯವರು. ತಾಯಿ ಗೌರಿ ಮುಗ್ಧ ಮನಸಿನ ಸತ್ಯಸಂಧ ಗ್ರಹಿಣಿ. ಗುರು ಹಿರಿಯರ ಬಗ್ಗೆ ಭಕ್ತಿ ವಿನಮ್ರತೆಯನ್ನು ಮೈಗೂಡಿಸಿಕೊಂಡಿದ್ದ ಮಹಿಳೆ. ರಂಗರಾವ್ ಬೆನ್ನಹಿಂದೆ ಆರು ಮಂದಿ ಸೋದರಿಯರು ಜನಿಸಿದ ತುಂಬು ಕುಟುಂಬ ಅವರದು. ಗುಮಾಸ್ತೆ ಕೆಲಸದಿಂದ ಬರುತ್ತಿದ್ದ ಅಲ್ಪ ಆದಾಯದಲ್ಲಿ ಕುಟುಂಬವನ್ನು ನಿರ್ವಹಿಸುತ್ತಾ ಮಕ್ಕಳಿಗೆ ಶಿಕ್ಷಣವನ್ನೂ ಕೊಡಿಸುವುದರಲ್ಲಿ ಶ್ರಮ ಪಡುತ್ತಿದ್ದ ದೇವಪ್ಪಯ್ಯ ಅಕಾಲಿಕವಾಗಿ ಮೃತಪಟ್ಟಾಗ ರಂಗರಾವ್ 16 ವರ್ಷದ ತರುಣ. ತುಂಬು ಕುಟುಂಬದ ಹೊಣೆ ಎಳೆಯನ ಹೆಗಲ ಮೇಲೆ ಬಿದ್ದಿತು. ಅದುವರೆಗೆ ಕಷ್ಟದಿಂದ ಕಾಸರಗೋಡಿನಲ್ಲಿ ಬಾಲ್ಯ ಶಿಕ್ಷಣವನ್ನು ಮುಗಿಸಿದರು.

ತಾಯಿ ಹಾಗೂ ಆರು ಮಂದಿ ಸೋದರ ಸೋದರಿಯರನ್ನು ಸಾಕುವುದಕ್ಕಾಗಿ ಉದ್ಯೋಗ ಅರಸಿ ಮಂಗಳೂರಿಗೆ ಬಂದರು. ಅವರಿಗೆ ಸಿಕಿದ್ದು ತಿಂಗಳಿಗೆ ಎಂಟು ರೂಪಾಯಿ ವೇತನದ ಅಧ್ಯಾಪಕ ವೃತ್ತಿ.

ರಂಗರಾವ್ ಅವರಿಗೆ ಸಿಕ್ಕಿದ ಅಧ್ಯಾಪಕ ವೃತ್ತಿಯಲ್ಲಿ ಅವರು ಬಹುಬೇಗ ಜನಪ್ರಿಯರಾದರು. ಬಾಲ್ಯದಿಂದಲೇ ಸದ್ಗುಣಗಳನ್ನು ಪೋಷಿಸಿಕೊಂಡು ಬಂದಿದ್ದ ರಂಗರಾವ್ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನವರಾದರು. ನಮ್ರತೆಯ ಸ್ವಭಾವದಿಂದ ನೆರೆಯವರಿಗೆ ಆತ್ಮೀಯರಾದರು. ಎಳವೆಯಿಂದ ಕಷ್ಟಗಳನ್ನು ಅರಿತಿದ್ದ ಅವರು ಕಲಿಸುವುದರಲ್ಲಿ ಉತ್ಸಾಹಿಯಾಗಿದ್ದರು. ತಮಗಿಂತಲೂ

ಕೆಳಹಂತದಲ್ಲಿದ್ದವರ ಬಗ್ಗೆ ಅಪಾರ ಕಾಳಜಿ ಉಳ್ಳವರಾಗಿದ್ದರು. ಆಗಿನ ಸಮಾಜದಲ್ಲಿ ಉಚ್ಚ ನೀಚ. ಮೇಲು ಕೀಳು ಎಂಬ ತಾರತಮ್ಯ ಭಾವಗಳಿದ್ದರೂ ರಂಗರಾವ್ ಎಲ್ಲ ವರ್ಗದ ಜನರೊಂದಿಗೆ ಮುಕ್ತವಾಗಿ ಬೆರೆಯುತ್ತಿದ್ದರು. ಅದರಲ್ಲಿಯೂ ಕೆಳಜಾತಿಯ ಬಡವರು ಮತ್ತು ಅಸ್ಪೃಶ್ಯರಾದ ದಲಿತ ವರ್ಗದವರನ್ನು ತುಂಬಾ ಹಚ್ಚಿಕೊಳ್ಳುತ್ತಿದ್ದರು.

ಅಧ್ಯಾಪಕರಾಗಿ ಗಳಿಸುತ್ತಿದ್ದ ಹಣದಿಂದ ತುಂಬು ಸಂಸಾರವನ್ನು ಹೆಚ್ಚು ಕಾಲ ನಡೆಸುವುದು ಸುಲಭವಲ್ಲ ಎಂದು ತಿಳಿದಿದ್ದ ರಂಗರಾವ್ ಆ ಕಾಲದಲ್ಲಿ ಖಾಸಗಿಯಾಗಿ ಮೆಟ್ರಿಕ್ಯುಲೇಷನ್ ಪರೀಕ್ಷೆ ತೆಗೆದುಕೊಂಡರು. ಅದರಲ್ಲಿ ತೇರ್ಗಡೆಯೂ ಆದರು. ಮತ್ತಷ್ಟು ಪರಿಶ್ರಮದಿಂದ ಅಂದಿನ ಪ್ಲೀಡರ್ ಶಿಪ್ (ವಕಾಲತ್) ಪರೀಕ್ಷೆಯನ್ನೂ ತೆಗೆದುಕೊಂಡು ಅದರಲ್ಲೂ ಉತ್ತೀರ್ಣರಾದರು. ವಕೀಲಿ ವೃತ್ತಿ ಕೈಗೊಂಡರು.[2]

ಅಂದಿನ ಸಾಮಾಜಿಕ ಸನ್ನಿವೇಶಕ್ಕೆ ಅನುಗುಣವಾಗಿ ರಂಗರಾವ್ ಹದಿಹರಯದಲ್ಲಿಯೇ ವಿವಾಹ ಬಂಧನಕ್ಕೂ ಒಳಗಾದರು. ಅವರ ಪತ್ನಿ ರುಕ್ಮಿಣಿಯಮ್ಮ ಅನುರೂಪ ಸಹಧರ್ಮಿಣಿ. ಮಂಗಳೂರಿನ ಸನಿಹದ ಉಳ್ಳಾಲದವರು. ಅತ್ತೆಯಂತೆಯೇ ಮುಗ್ಧ ಮಹಿಳೆ. ಪತಿಯ ಯಾವತ್ತೂ ಕೆಲಸಗಳಲ್ಲಿ ಸಹವರ್ತಿಯಾಗಿ ಸಹಕರಿಸಿದ ಸದ್ಗೃಹಿಣಿ. ನಿಶ್ಚಿತ ಆದಾಯದ ಅಧ್ಯಾಪಕ ವೃತ್ತಿ ತ್ಯಜಿಸಿದಾಗ ಅದಕ್ಕಾಗಿ ಅಸಮಾಧಾನಗೊಳ್ಳಲಿಲ್ಲ. ಅನಿಶ್ಚಿತವೆನಿಸಿದ ವಕೀಲಿ ವೃತಿ ಕೈಗೊಂಡಾಗ ಅದಕ್ಕೆ ಪ್ರತಿ ಹೇಳಲಿಲ್ಲ. ಪತಿಯ ಎಲ್ಲ ಬಗೆಯ ಕೆಲಸಗಳಿಗೂ ಅವರು ಒತ್ತಾಸೆಯಾಗಿ ನಿಂತರು.

- <u>ಬಡವರ ವಕೀಲರೆಂದು ಖ್ಯಾತಿ</u>

ವಕೀಲರಾಗಿ ರಂಗರಾವ್ ಬೇಗನೆ ಹೆಸರಾದರು. ಅವರ ಪತ್ನಿಯ ಸೋದರ ಉಳ್ಳಾಲದ ರಘುನಾಥಯ್ಯ ಅವರೊಂದಿಗೆ ಉತ್ತಮ ಒಡನಾಟವಾಯಿತು. ರಂಗರಾವ್ ಅವರಂತೆಯೇ ಸಾಮಾಜಿಕ ಕಾಳಜಿ ಹೊಂದಿದ್ದವರು ರಘನಾಥಯ್ಯ. ಸಜ್ಜನ. ಧಾರ್ಮಿಕ ಶ್ರದ್ಧೆಯ ವ್ಯಕ್ತಿ. ಆಗ

ಸಮಾಜದಲ್ಲಿದ್ದ ಮೂಢನಂಬಿಕೆ, ಅಂಧಾನುಕರಣೆ, ಮೇಲುಕೀಳಿನ ತಾರತಮ್ಯಗಳ ವಿರುದ್ಧ ರಂಗರಾವ್ ತಾಳಿದ್ದ ಅಸಮಾಧಾನ ರಘುನಾಥಯ್ಯ ಅವರಲ್ಲಿಯೂ ಇತ್ತು.

ದೇಶದಲ್ಲಿ ಬ್ರಿಟಿಷರ ಆಡಳಿತ ನೆಲೆಗೊಂಡಿದ್ದು ಹೊಸಬಗೆಯ ಶಿಕ್ಷಣ ಕ್ರಮದಿಂದ ಒಂದು ಬಗೆಯ ಜಾಗೃತ ಸ್ಥಿತಿಗೆ ಬಂದಿದ್ದ ಅಂದಿನ ಸುಶಿಕ್ಷಿತ ವ್ಯಕ್ತಿಗಳು ಹೊಸತನಕ್ಕೆ ತುಡಿಯುತ್ತಿದ್ದರು. ದೂರದ ಬಂಗಾಳದಲ್ಲಿ ಆರಂಭವಾಗಿದ್ದ ರಾಷ್ಟ್ರೀಯತೆಯ ಗಾಳಿ ಕರಾವಳಿಯ ಈ ಪಶ್ಚಿಮ ಭಾಗಕ್ಕೂ ಬೀಸಲಾರಂಭಿಸಿತ್ತು. ಬಂಗಾಳದಲ್ಲಿ ರಾಜಾರಾಮ ಮೋಹನರಾಯ್ ಹುಟ್ಟು ಹಾಕಿದ್ದ ಹೊಸ ಸಮಾಜ ಪುನರುಜ್ಜೀವನದ ಅಲೆ ದಕ್ಷಿಣ ಭಾಗಕ್ಕೂ ಅವರಿಸಿತ್ತು. ಮಂಗಳೂರು ಪ್ರದೇಶದಲ್ಲಿ ನೆಲೆಗೊಂಡಿದ್ದ ಮಿಷನರಿಗಳು ಕ್ರೈಸ್ತಮತ ಪ್ರಚಾರಕ್ಕೆ ತೀವ್ರ ಪ್ರಯತ್ನ ನಡೆಸಿದ್ದರು.

ಇಂಗ್ಲೀಷ್ ಶಿಕ್ಷಣದಿಂದ ಹೊಸಬಗೆಯ ತುಡಿತಕ್ಕೆ ಒಳಗಾಗಿದ್ದ ರಘನಾಥಯ್ಯ ಒಂದು ಹಂತದಲ್ಲಿ ಕ್ರಿಶ್ಚಿಯನ್ ಆಗಿ ಮತಾಂತರ ಹೊಂದಿದರು.[3] ಆದರೆ, ಅದರಿಂದ ತಮ್ಮ ಕುಟುಂಬಕ್ಕೆ ಎದುರಾದ ಮಾನಸಿಕ ಕ್ಲೇಶದಿಂದ ಎಚ್ಚರಗೊಂಡು ಬ್ರಹ್ಮ ಸಮಾಜಕ್ಕೆ ಸೇರಿಕೊಂಡರು. ಅವರು ಮಂಗಳೂರಿನಲ್ಲಿ 1870 ರಲ್ಲಿ ಬ್ರಹ್ಮ ಸಮಾಜವನ್ನು ಆರಂಭಿಸಿದರು. ಅವರ ನಿಕಟವರ್ತಿಗಳಾಗಿದ್ದ ರಂಗರಾವ್ ಕೂಡ ಅದರಲ್ಲಿ ತೊಡಗಿಕೊಂಡರು. ಹಿಂದೂ ವೇದಾಂತ ತತ್ವವನ್ನು ಆದರಿಸಿದ ಈ ಸುಧಾರಕ ಪಂಥವು ಜಾತಿ, ಮತ ಧರ್ಮಗಳ ಮಧ್ಯೆ ಯಾವ ತಾರತಮ್ಯವನ್ನೂ ಒಪ್ಪದ ಧಾರ್ಮಿಕ ಸಂಘಟನೆ, ಕ್ರೈಸ್ತ ಮತಕ್ಕೆ ಮತಾಂತರಗೊಳ್ಳುತ್ತಿದ್ದ ಅಂದಿನ ಭರಾಟೆಯನ್ನು ಎದುರಿಸಲು ರಾಷ್ಟ್ರೀಯವಾದ ಸುಧಾರಕರಿಂದ 1931ರಲ್ಲಿಯೇ ಸ್ಥಾಪನೆಯಾಗಿದ್ದ ಪಂಥ.

ರಂಗರಾವ್ ಅವರದು ಸತ್ಯಕ್ಕೆ ಬದ್ಧವಾದ ವ್ಯಕ್ತಿತ್ವ ಸರಿ ಕಂಡುದನ್ನು ನಿರ್ಭೀತಿಯಿಂದ ಹೇಳುವ ಎದೆಗಾರಿಕೆ. ಬಡವರು ಮತ್ತು ತುಳಿತಕ್ಕೆ ಒಳಗಾದ್ದವರ ಬಗ್ಗೆ ಇನ್ನಿಲ್ಲದ ಕಳಕಳಿ. ಸತ್ಯ ನ್ಯಾಯಕ್ಕಾಗಿ ಬಡಜನರ, ದೀನ ದಲಿತರ ವಕಾಲತ್ತುಗಳನ್ನೇ ವಹಿಸಿಕೊಂಡು ಅವರಿಗಾಗುತ್ತಿರುವ ಅನ್ಯಾಯ ವಂಚನೆಗಳ ವಿರುದ್ಧ ಹೋರಾಡುತ್ತಿದ್ದರು. ಅದರಲ್ಲಿ ಹೆಚ್ಚಿನ ಯಶಸ್ಸು ಪಡೆದರು. ಬಡವರ

ವಕೀಲರಾಗಿ ನ್ಯಾಯಾಧೀಶರನ್ನು ಆಕರ್ಷಿಸಿತ್ತು. ಸೇವಾ ದೃಷ್ಟಿಯಿಂದ ವಕೀಲಿ ವೃತಿಯನ್ನು ನಡೆಸುತ್ತಿದ್ದ ಅವರು ಬಹುಬೇಗನೇ 'ಬಡವರ ವಕೀಲ'ರೆಂದು ಖ್ಯಾತಿ ಪಡೆದರು. 'ಬಡವರ ಬಂಧು' ಎಂಬ ಅಭಿದಾನಕ್ಕೂ ಪಾತ್ರರಾದರು.

ಅವರ ವಕೀಲಿ ವೃತ್ತಿಯ ಆರಂಭದ ದಿನಗಳಲ್ಲಿ ಮೇಲುಜಾತಿಯ ಆಢ್ಯನೊಬ್ಬ ಕೆಳ ಜಾತಿಯ ಮಹಿಳೆಯೊಬ್ಬರ ಮೇಲೆ ಅತ್ಯಾಚಾರ ಎಸಗಿದ. ಆದುದರಿಂದ ಆ ಮಹಿಳೆ ಗರ್ಭಿಣಿಯಾದಳು. ರಂಗರಾವ್ ಆ ಮಹಿಳೆಯ ಕೇಸನ್ನು ತೆಗೆದುಕೊಂಡು ಹೋರಾಟ ನಡೆಸಿದರು.

ನ್ಯಾಯಾಲಯದಲ್ಲಿ ಮಾತ್ರವಲ್ಲದೆ, ಮೇಲು ಜಾತಿಯ ಸವರ್ಣೀಯರನ್ನೂ ಅವರು ಈ ಪ್ರಕರಣದಲ್ಲಿ ಎದುರಿಸಬೇಕಾಯಿತು. ಅಂತಿಮವಾಗಿ ಮಹಿಳೆಗೆ ನ್ಯಾಯ ಸಿಕ್ಕಿತು. ಇದರಿಂದ ಮೇಲು ಜಾತಿಯವರ ಅಸಮಾಧಾನ ಮುಂದುವರಿಯಿತು.[4] ಆದರೆ, ಕೆಳಜಾತಿಯವರು ರಂಗರಾವ್ ಅವರನ್ನು ಆರಾಧಿಸತೊಡಗಿದರು. ತಳವರ್ಗದ, ಬಡ ಜನರ ಬಗೆಗಿನ ಅವರ ಮಾನವೀಯ ಕಾಳಜಿ ಬ್ರಿಟಿಷ್ ನ್ಯಾಯಾದೀಶರ ಗಮನವನನ್ನೂ ಸೆಳೆಯಿತು. ಅವರು ರಂಗರಾವ್ ಅವರನ್ನು ಅತ್ಯಂತ ಗೌರವದಿಂದ ಕಾಣತೊಡಗಿದರು.

ರಂಗರಾವ್ ಅವರು ವಕೀಲಿ ನಡೆಸುತ್ತಿದ್ದುದು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳ ಕಾಲಘಟ್ಟದಲ್ಲಿ.[5] ಮದ್ರಾಸ್ ಪ್ರೆಸಿಡೆನ್ಸಿಯ ನೇರ ಅಳ್ವಿಕೆಗೆ ಒಳಪಟ್ಟದ್ದ ಪಶ್ಚಿಮ ಕರಾವಳಿಯ ಈ ವಿಶಿಷ್ಟ ಪ್ರದೇಶದಲ್ಲಿ ಆಡಳಿತವನ್ನು ಸುಭದ್ರವಾಗಿ ನೆಲೆಗೊಳಸಿದರು ಬ್ರಿಟಿಷರು ಸಾರ್ವಜನಿಕವಾಗಿ ಕೆಲವು ಸುಧಾರಣಾ ಕ್ರಮಗಳನ್ನು ಆರಂಭಿಸಿದ್ದರು. ಕೆಳ ಜಾತಿಯವರ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳನ್ನು ಹಾಕಿಕೊಂಡರು. ಶಾಲೆಗಳನ್ನು ತೆರೆದರು. ಸಾರ್ವಜನಿಕ ಬಾವಿಗಳನ್ನು ತೋಡಿಸಿದರು. ಅವರಿಗಾಗಿ ಪ್ರತ್ಯೇಕ ಕಾಲೋನಿಗಳನ್ನೂ ಗುರುತಿಸಿದರು.

1. ಪಿ.ಕಮಲಾಕ್ಷ, ದಕ್ಷಿಣ ಕನ್ನಡದ ಗಿರಿಜನರು ಮತ್ತು ಹರಿಜನರ ಸಾಮಾಜಿಕ ಇತಿಹಾಸ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 1994 ಪುಟ – 06

2. ಲಕ್ಷ್ಮಣ್ ಕೊಡಸೆ, ದಲಿತೋದ್ಧಾರಕ ಗುರು ಕುದ್ಮುಲ್ ರಂಗರಾವ್, ಪ್ರಕಾಶಕರು ಕನ್ನಡ ಸಂಘ, ಕಾಂತವರ, 2015, ಪುಟಗಳು 3-4.

3. ಮೇಲಿನದೇ, ಪುಟ -06

4. ಅಖಿಲ ಭಾರತ ಮುಂಡಾಲ ಯುವ ವೇದಿಕೆ ಪ್ರಕಟಿಸಿದ ಕೃತಿ 'ಅಮೃತ ಬಿಂದು, ಪೂಜ್ಯನೀಯ ಕುದ್ಮುಲ್ ರಂಗರಾವ್, 2012, ಪುಟ – 12

5. ಉದಯ ಬಾರ್ಕೂರ್, ಇತಿಹಾಸದ ಶೋಧ ಗತದ ಹುಡುಕಾಟ, ತುಳು ಸಂಸ್ಕೃತಿ ಚರಿತ್ರೆ ಕಥನ, ಆಕೃತಿ ಪ್ರಿಂಟರ್ಸ್, 2015, ಪುಟ 168

# ಅಧ್ಯಾಯ – 02

## ಸಮಾಜದ ಜಾತಿ ವ್ಯವಸ್ಥೆಯ ಕಟ್ಟು ಪಾಡುಗಳು

- ನಿಷ್ಠುರ ಕಟ್ಟಳೆಗಳಿಗೆ ಕಟ್ಟು ಬಿದ್ದ ದಲಿತ ಸಮುದಾಯ
- ಪರಿಶಿಷ್ಟ ಜಾತಿಗೆ ಸೇರಿದ ಉಪಜಾತಿಗಳು
- ಪರಿಶಿಷ್ಟ ಬುಡಕಟ್ಟು ವಿಭಾಗಕ್ಕೆ ಸೇರಿದವರು
- ಹತ್ತೊಂಬತ್ತನೆಯ ಶತಮಾನದ ತುಳುನಾಡಿನಲ್ಲಿ ಗುಲಾಮಗಿರಿ ಪದ್ಧತಿ

# ಸಮಾಜದ ಜಾತಿ ವ್ಯವಸ್ಥೆಯ ಕಟ್ಟು ಪಾಡುಗಳು

- **ನಿಷ್ಠುರ ಕಟ್ಟಳೆಗಳಿಗೆ ಕಟ್ಟುಬಿದ್ದ ದಲಿತ ಸಮುದಾಯ :**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಲಿತರಾಗಿ ಹುಟ್ಟುವುದಕ್ಕಿಂತ ಪಶುಪಕ್ಷಿಗಳಾಗಿ ಹುಟ್ಟಿ ಬದುಕುವುದು ಉತ್ತಮ ಎಂಬಷ್ಟರ ಮಟ್ಟಿಗೆ ಅವರ ಬದುಕು ದುಸ್ತರವಾಗಿತ್ತು. ಇಲ್ಲಿ ಬ್ರಿಟಿಷರ ಆಳ್ವಿಕೆ ಮೊದಲಾದದ್ದು 1899 ರಲ್ಲಿ ಬ್ರಿಟಿಷರ ಆಡಳಿತದಲ್ಲಿ ಕೆಲವು ಕಾಲ ಸರಿದು ಅವರು ದಲಿತರಿಗಾಗಿ ಕೆಲವು ಸುಧಾರಣಾ ಕ್ರಮಗಳನ್ನು ಕೈಗೊಳ್ಳುವವರೆಗೆ ದಲಿತರಿಗೆ ಮತ ಸ್ವಾತಂತ್ರ್ಯ ಇರಲಿಲ್ಲ. ಅವರಿಗೆ ಅಭಿಪ್ರಾಯ ಸ್ವಾತಂತ್ರ್ಯವೂ ಇರಲಿಲ್ಲ. ಸಾರ್ವಜನಿಕ ಸ್ಥಳಗಳಲ್ಲಿ ಇತರರಂತೆ ಭಾಗವಹಿಸುವ ಸ್ವಾತಂತ್ರ್ಯವೂ ಇರಲಿಲ್ಲ. ಅವರು ಪೂರ್ವಜನ್ಮದ ಪಾಪಕರ್ಮಗಳಿಂದ ದಲಿತರಾಗಿ ಹುಟ್ಟಿದ್ದಾರೆಂಬ ಭಾವನೆ ಬರುವಂತೆ ಸಮಾಜದ ಇತರ ವರ್ಗದವರು ನೋಡುತ್ತಿದ್ದರು. ಹಾಗೆ ಕಥೆ ಪುರಾಣಗಳಿಂದ ಹೇಳಿ ನಂಬಿಸಿಯೂ ಇದ್ದರು.

ಪ್ರಸ್ತುತ ಸಮಕಾಲಿನ ಸಮಾಜದಲ್ಲಿ ಅಸ್ಪೃಶ್ಯರ ಏಳಿಗೆಯ ಕುರಿತು ಅಧ್ಯಯನ ಮಾಡುವ ಸಂಧರ್ಭದಲ್ಲಿ ಮೇಲ್ವರ್ಗದಲ್ಲಿ ಪ್ರಮುಖವಾಗಿ ಬಂಟ ಸಮುದಾಯವು ಪರಿಶಿಷ್ಟ ಜಾತಿಯಲ್ಲಿರುವ ಮುಂಡಾಳ ಸಮುದಾಯದ ಜೊತೆ ಅನ್ಯೋನ್ಯವಾದ ಭಾಂಧವ್ಯವನ್ನು ಬೆಳೆಸಿಕೊಂಡಿದೆ. ಇದಕ್ಕೆ ಪ್ರತಿಯಾಗಿ ಧಾರ್ಮಿಕ ಹಿನ್ನಲೆಯೂ ಕಂಡು ಬರುತ್ತದೆ. ಮುಂಡಾಲ ಸಮುದಾಯದ ಪರಿಶಿಷ್ಟ ಜನರು ನಂಬಿಕೊಂಡು ಬಂದ ಬಬ್ಬುಸ್ವಾಮಿ ದೈವವನ್ನು ಬಾಲ್ಯದಲ್ಲಿ ಬಂಟ ಸಮುದಾಯಕ್ಕೆ ಸೇರಿದ ಕೊಡಂಗೆ ಬನ್ನಾರರು ಸಾಕಿ ಸಲಹಿದ ಘಟನೆ ಇದೆ. ಇವತ್ತಿಗೂ ಮಂಗಳೂರಿನಲ್ಲಿ ಅನೇಕ ಬಬ್ಬುಸ್ವಾಮಿ ದೈವಸ್ಥಾನಗಳಿದ್ದು ಇವುಗಳ ಜೀರ್ಣೋದ್ಧಾರದ ಪ್ರಮುಖ ಪಾತ್ರ ಬಂಟರು ವಹಿಸಿ ಕೊಂಡಿರೋದನ್ನ ಕ್ಷೇತ್ರದ ಗುರಿಕಾರರಲ್ಲಿ ಪಡಕೊಂಡ ಮಾಹಿತಿ ಪ್ರಕಾರ ತಿಳಿದು ಬರುತ್ತದೆ.

ಅಸ್ಪೃಶ್ಯರ ಶೋಷಣೆಯ ಬಗ್ಗೆ ರಂಗರಾಯರು ಬಾಬುಗುಡ್ಡದಲ್ಲಿ ಕಟ್ಟಿದ ಶಾಲೆಯ ವಿಧ್ಯಾರ್ಥಿಯಾದ ಶ್ಯಾಮ್ ಕರ್ಕೇರರವರಲ್ಲಿ ತಿಳಿದುಕೊಂಡಾಗ, ಅವರ ಹಿರಿಯರ ಮೌಖಿಕ ದಾಖಲೆಯ ಪ್ರಕಾರ 19 ನೇ ಶತಮಾನದ ಪ್ರಾರಂಭದಲ್ಲಿ ಮೇಲ್ವರ್ಗಕ್ಕೆ ಸೇರಿದ ಬಾಹ್ಮಣರು, ಬಂಟರು ಎದುರುಗಡೆಯಲ್ಲಿ ಒಂದು ಹೊಸ ಉಡುಪನ್ನು ಕೂಡ ಧರಿಸಿ ಅವರ ಮುಂದೆ ಹೋಗುವಂತಹ ಪರಿಸ್ಥಿತಿ ಇರಲಿಲ್ಲ. ಕೃಷಿ ಭೂಮಿಯಲ್ಲಿ ದುಡಿಯುತ್ತಿದ್ದ ಈ ಜನರಿಗೆ ಶಿಕ್ಷಣದ ದೊಡ್ಡ ಕೊರತೆ ಕಂಡು ಬರುತ್ತಿತ್ತು. ನಮ್ಮ ಮಕ್ಕಳೂ ಕೂಡ ಶಿಕ್ಷತರಾಗಬೇಕು ಎಂದು ಆಸೆ ಇಟ್ಟು ಕೊಂಡು ಅವರನ್ನು ಶಾಲೆಗೆ ಸೇರಿಸಲು ಮುಂದಾದಲ್ಲಿ ಅವರ ಮಕ್ಕಳನ್ನು ಸೇರಿಸಿ ಕೊಳ್ಳಲು, ಮೇಲ್ವರ್ಗದ ಶಾಲೆಗಳ ಆಡಳಿತ ಇದ್ದುದರಿಂದ, ಅವರನ್ನು ಶೈಕ್ಷಣಿಕ ವ್ಯವಸ್ಥೆಯಿಂದ ದೂರವಿಟ್ಟರು. ಇದೂ ಒಂದು ಕಾರಣ. ಮತ್ತೊಂದು ಬಹಳ ಮುಖ್ಯವಾಗಿ ಗಮನಿಸ ಬೇಕಾದಂತಹ ವಿಚಾರ ಎಂದರೆ ಅವರ ಮೈ ಬಣ್ಣ, ತೀರಾ ಕರಿ ಕಪ್ಪು ಬಣ್ಣವನ್ನು ಹೊಂದಿದಂತಹ ಜನರಾಗಿದ್ದು ಸಾಮಾನ್ಯವಾಗಿ ಮೇಲ್ವರ್ಗದ ಸಣ್ಣ ಮಕ್ಕಳೂ ಕೂಡಾ ಇವರನ್ನು ಗುರುತಿಸುತ್ತಿದ್ದರು. ಆದ್ದರಿಂದಲೇ ಸಮಾಜದ ವಿಶಾಲ ಪ್ರದೇಶದಿಂದ ಇವರು ತುಸು ದೂರವೇ ವಾಸಿಸ ಬೇಕಾಯಿತು.

ಸಂಸ್ಕೃತಿಯ ಅರಿವನ್ನು ಮೂಡಿಸಲು ಯತ್ನಿಸಿದ ರಂಗರಾಯರು ಅಸ್ಪೃಶ್ಯರ ಆಚರಣೆಗಳಾದ ಪ್ರಾಣಿ ಬಲಿಯನ್ನು ತೀವ್ರವಾಗಿ ವಿರೋಧಿಸಿದವರು. ಹೀಗಾಗಿ ಭಜನಾ ಸಂಕೀರ್ತನೆ ಮತ್ತು ಸಂಸ್ಕೃತದ ಶ್ಲೋಕವನ್ನು ತಿಳಿ ಹೇಳುವುದರೊಂದಿಗೆ ಬ್ರಾಹ್ಮಣ ಪ್ರೇರಿತ ಸಂಸ್ಕೃತಿಯನ್ನು ಅವರಿಗೆ ತಿಳಿ ಹೇಳುವ ಮತ್ತು ಆ ಮೂಲಕ ಅವರನ್ನು ಹಿಂದೂ ಧರ್ಮದಿಂದ ಮತಾಂತರ ಹೊಂದದ ರೀತಿಯಲ್ಲಿ ಭಜನಾ ಸಂಕೀರ್ತನೆ ಮತ್ತು ವೈಷ್ಣವ ಧರ್ಮ ಪಾಲನೆಯೊಂದಿಗೆ ನಿಯಂತ್ರಿಸುವ ವ್ಯವಸ್ಥೆಯೂ ಅವರಿಗಿದ್ದಿರಬಹುದು. ಯಾಕೆಂದರೆ ಪ್ರಸ್ತುತ ಅವಲೋಕನವನ್ನು ಗಮನಿಸಿದಾಗ ದೈವಾರಾಧನೆಗೆ ಕೊಡುವ ಪ್ರಾಣಿ ಬಲಿಯೂ ಕಡಿಮೆಯಾಗಲಿಲ್ಲ, ವಿಠ್ಠಲನ ಭಜನೆ ಮತ್ತು ಸಂಸ್ಕೃತ ಶ್ಲೋಕವನ್ನು ನಿಧಾನವಾಗಿ ಮೈಗೂಡಿಸಿ ಕೊಂಡ ಇಂತಹ ವೈಷ್ಣವ ಧರ್ಮದ ಆರಾಧನೆಯೂ ಕಡಿಮೆಯಾಗಲಿಲ್ಲ. ಎರಡೂ ಆಚರಣೆಗಳಿಗೂ ಸಮಾನವಾದ ಭಕ್ತಿಯಿಂದ ಕೊಂಡಾಡುತ್ತಿದೆ..

ರಂಗರಾಯರ ಚಿಂತನೆ ಎಂತಹದಿತ್ತೆಂದರೆ ಒಂದು ಕಡೆ ಅನಿಷ್ಟ ಪದ್ಧತಿಗಳನ್ನು ದೂರ ಮಾಡಿ, ಹಿಂದೂ ಸಂಸ್ಕೃತಿಯ ದೇವತಾರಾಧನೆ ಮತ್ತು ಧ್ಯಾನದಿಂದ ಮನ ಶಾಂತಿಯ ಜೊತೆಗೆ ದುಷ್ಚಟಕ್ಕೆ ಬಲಿಯಾದ ಅಸ್ಪ್ರಶ್ಯರನ್ನು ನಿಯಂತ್ರಿಸುವುದೂ ಕೂಡ ಆಗಿದ್ದಿರ ಬಹುದು.

18 ಮತ್ತು 19ನೇ ಶತಮಾನದಲ್ಲಿ ಈಗ ಕರೆಯಲ್ಪಡುವ ಬಿಲ್ಲವ ಸಮುದಾಯದ ಜನರೂ ಕೂಡಾ ಅಸ್ಪೃಶ್ಯರೇ ಎಂದು ಗೋಚರವಾಗುತ್ತದೆ. ಇವರು ಕೂಡಾ ಅಸ್ಪೃಶ್ಯರ ಗುಂಪಿಗೆ ಸೇರಿದ್ದರು ನಿಧಾನವಾಗಿ ಸಾಮಾಜಿಕವಾಗಿ ತಮ್ಮ ಅಭಿವೃದ್ಧಿಯನ್ನು ಕಂಡು ಕೊಂಡವರು. ಬಹಳ ವಿಶೇಷವಾಗಿ 1908 ರಲ್ಲಿ ಕುದ್ರೋಳಿಯ ಕ್ಷೇತ್ರದ ಪ್ರತಿಷ್ಠಾಪನೆಯ ನಂತರ, ಧಾಮಿಕವಾಗಿ ಪ್ರಬಲರಾದ ಈ ಸಮೂದಾಯವು ರಾಜಕೀಯವಾಗಿಯೂ ಬೆಳೆಯಲು ಪ್ರಾರಂಭಿಸಿತು. ಇದಕ್ಕೆ ಪೂರಕ  ಸಾಕ್ಷಿಯೇ ಮಾಜಿ ಕೇಂದ್ರ ಸಚಿವ ಜನಾರ್ಧನ ಪೂಜಾರಿಯವರು. ಬಿಲ್ಲವ ಸಮುದಾಯಕ್ಕೆ ಸೇರಿದ ಇವರು, ಕುದ್ರೋಳಿ ಗೋಕರ್ಣನಾಥ ಕ್ಷೇತ್ರದ ಅಭಿವೃದ್ಧಿಯ ರುವಾರಿಯಾಗಿದ್ದು ಈ ಕ್ಷೇತ್ರವನ್ನು ವಿಶ್ವ ಮಟ್ಟದಲ್ಲಿ ಗುರುತಿಸಿದ ಕೀರ್ತಿ ಅವರದ್ದು. ವಿಶೇಷವಾಗಿ ನಾರಾಯಣ ಗುರುಗಳ ಮಂದಿರವನ್ನು ದ.ಕ. ಉಡುಪಿ ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ಪ್ರತಿಷ್ಠಾಪಿಸಲು ಪ್ರೇರಣಾ ಶಕ್ತಿ ಎಂದು ಹೇಳಬಹುದು. ರಂಗರಾಯರು ಕೂಡಾ ಬೇರೆ ಸಮುದಾಯಕ್ಕೆ ಸೇರಿದವರಾದರೂ ಕೂಡಾ ಭಜನಾ ಕೀರ್ತನೆಯೊಂದಿಗೆ ಸಂಸ್ಕೃತಿಯನ್ನು ಬೆಳೆಸಲು ಪ್ರಯತ್ನಿಸಿದರು. ಆದರೆ ದುಸ್ಥಿತಿಯೆಂದರೆ ಇದನ್ನು ಸರಿಯಾಗಿ ನಿಭಾಯಿಸಿಕೊಂಡು ಹೋಗಲು ಅಸ್ಪೃಶ್ಯರಲ್ಲೂ ಹಿಂದೇಟಿತ್ತು ಇದಕ್ಕೆ ಮಧ್ಯಪಾನವೂ ಒಂದು ಕಾರಣ ಎನ್ನಬಹುದು.

ರಂಗರಾಯರು ಬ್ರಾಹ್ಮಣ ಸಂಸ್ಕೃತಿಯಲ್ಲಿರುವ ಶೋಷಣಾ ನೀತಿಯನ್ನು  ವಿರೋಧಿಸಿದವರು. ಮತ್ತು ಬ್ರಾಹ್ಮಣೀಕರಣದಲ್ಲಿರುವ ಮೌಢ್ಯಗಳನ್ನು ತಿರಸ್ಕರಿಸಿದವರು. ಮಾತ್ರವಲ್ಲ ಧರ್ಮದಲ್ಲಿರುವ ಒಳಿತಿನ ಸಂಸ್ಕೃತಿಯಿಂದ ಅಸ್ಪೃಶ್ಯರ ಅಭ್ಯುದಯವನ್ನು ಕಾಣಲು ಬಯಸಿದವರು. ಆದುದರಿಂದಲೇ ವೈಷ್ಣವ ಧರ್ಮದ ಕೆಲವೊಂದು ಮೌಢ್ಯವಲ್ಲದ ಶುದ್ಧ ಆಚಾರಗಳನ್ನು ಅಸ್ಪೃಶ್ಯರಿಗೆ ಬೋಧಿಸಿ, ಆ ಮೂಲಕ ಸಮಾಜದಲ್ಲಿ ಅವರನ್ನು ಸುಸಂಸ್ಕೃತರನ್ನಾಗಿ ಮಾಡಲು ಪ್ರಯತ್ನಿಸಿರ ಬಹುದು.

ಮೇಲ್ವರ್ಗದ ಜೊತೆಗೆ ದಲಿತರ ಹೋಲಿಕೆಯನ್ನೂ ನಾವು ಅಧ್ಯಯಿಸುವ ಸಂಧರ್ಭದಲ್ಲಿ ಕೃಷಿ ಭೂಮಿಯನ್ನು ಬಹಳಷ್ಟು ಹೊಂದಿದ್ದ ಬಂಟ ಮತ್ತು ಜೈನ ಸಮುದಾಯವು, ಭೂಮಿಯ ಉಳುಮೆ ಮತ್ತು ಇತರೆ ದುಡಿಮೆಗಳಗಾಗಿ ಅಸ್ಪೃಶ್ಯರನ್ನು ಅವಲಂಬಿಸಿದ್ದರು. ಇದಕ್ಕೆ ಸಂಬಂಧಿಸಿದಂತೆ, ಕೊಡಿಯಾಲ್‌ಬೈಲ್ ಜೈಲ್‌ರೋಡ್‌ನ ಗಣೇಶ್‌ರಾವ್ ರಸ್ತೆಯಲ್ಲಿ ಒಂದು ಪರಿಶಿಷ್ಟ ವರ್ಗದ ಮುಂಡಾಲರ ಕಾಲನಿಯಿದೆ. ಈ ಕಾಲನಿಯಲ್ಲಿ ಸುಮಾರು 20 ಸೆನ್ಸ್ ಜಾಗವಿದ್ದು, ಬಂಟ ಸಮುದಾಯಕ್ಕೆ ಸೇರಿದ ಈಗಿರುವ ಕೋಟಿ ಪ್ರಸಾದ್ ಆಳ್ವ ಎಂಬವರ ತಂದೆ ರಾಮಯ್ಯ ಆಳ್ವ ಎಂಬವರು ಪರಿಶಿಷ್ಟರಿಗಾಗಿ ದಾನ ಮಾಡಿದ ಸ್ಥಳವಾಗಿದೆ. ಇವತ್ತಿಗೂ ಈ ಕಾಲನಿಯಲ್ಲಿ ಪರಿಶಿಷ್ಟರಿದ್ದು ರಂಗರಾಯರ 'ಈಶ್ವರಾನಂದ' ಎಂಬ ಹೆಸರಿರುವ ಭಜನಾ ಮಂದಿರವಿರುವುದು ಗಮನಕ್ಕೆ ಬರುತ್ತದೆ. ರಂಗರಾಯರು ಸ್ಥಾಪಿಸಿದ ಡಿಪ್ರೆಸ್ಡ್ ಕ್ಲಾಸ್ ಮಿಷನ್ ಸಂಸ್ಥೆಯಲ್ಲಿ ಕಲಿತ ದಿವಾಂಗತ ದೇವಪ್ಪ ಕುದ್ರೋಳಿಯವರು ಒಬ್ಬ ಪೋಸ್ಟ್ ಮ್ಯಾನ್ ಆಗಿದ್ದರು. ಇವರು ತಿಳಿಸಿದ ಕೆಲವೊಂದು ಮಾಹಿತಿಯನ್ನು ಇವರ ಮಗನಾದ ಯಶವಂತ ಕುದ್ರೋಳಿಯವರು ತಿಳಿಸಿದ್ದಾರೆ. ದೇವಪ್ಪ ಕುದ್ರೋಳಿಯವರು ದಿನಾಂಕ 07-04-1968 ರಂದು ಈಶ್ವರಾನಂದ ಭಜನಾ ಮಂಡಳಿಯನ್ನು ಸ್ಥಾಪಿಸಿದವರಾಗಿದ್ದಾರೆ.

ವರ್ಣಜಾತಿಗಳ ಆಧಾರದಲ್ಲಿ ರೂಪಿತವಾದ ಶ್ರೇಣಿಕೃತ ಭಾರತೀಯ ಸಮಾಜದಲ್ಲಿ ದಲಿತರ ಸ್ವತಿಂಕೆಯ ಸ್ವಾಭಿಮಾನದ ಬದುಕನ್ನು ಹುಡುಕಾಡುವ ಪ್ರಯತ್ನಗಳು ನಡೆದಿವೆ. ಆಧುನಿಕ ಕಾಲಘಟ್ಟದಲ್ಲಿ 19ನೇ ಶತಮಾನದ ಉತ್ತರಾರ್ಧದಿಂದ ಹುಟ್ಟಿ ಬೆಳೆದು ಬಂದ ಬ್ರಾಹ್ಮಣೇತರ, ದಲಿತ ಪರವಾದ ಜಾತಿ ವಿರೋಧಿ ಹೋರಾಟಗಳು ದಲಿತರ ಏಳಿಗೆಗಾಗಿ ಪ್ರಯತ್ನಿಸಿದ್ದರಲ್ಲದೇ, ಜನಾಂಗೀಯ, ಸಾಂಸ್ಕೃತಿಕ ಸ್ವಂತಿಕೆಯು ವಿಚಾರಗಳನ್ನು ಚರ್ಚಿಸಿದವು. ಪಾರಂಪರಿಕವಾಗಿ ಪ್ರಬಲವಾಗಿದ್ದ ಮೇಲ್ಜಾತಿಗಳು ಆಧುನಿಕ ಸಂಧರ್ಭದಲ್ಲೂ ಶಿಕ್ಷಣ, ಅಧಿಕಾರಿಗಳನ್ನು ತಮ್ಮದಾಗಿಸಿಕೊಂಡು ಭಾರತವನ್ನು ಹಿಂದೂ ರಾಷ್ಟ್ರೀಯತೆಯ ನೆಲೆಯಲ್ಲಿ ನಿರೂಪಿಸತೊಡಗಿದಾಗ, ಅನೇಕ ಆದರ್ಶ ಪ್ರಿಯರು ದಲಿತರ ರಾಷ್ಟ್ರೀಯತೆಯ ಕಲ್ಪನೆಯನ್ನು ಮುಂದಿಟ್ಟರು.

ಇತಿಹಾಸದ ಕಾಲದಿಂದ ಜಿಲ್ಲೆಯನ್ನು ಆಳುತ್ತಿದ್ದ ಕದಂಬರು, ಅಲೂಪ ಅರಸರು, ಜೈನ ಅರಸರು, ಬಂಟರು ಹಾಗೂ ಅಲ್ಲಲ್ಲಿಯ ಗುತ್ತು ಬೀಡುಗಳ ಒಡೆಯರ ಕಾಲಗಳಲ್ಲಿ ಅವರ ಬೇಸಾಯದ ಕಸುಬಿನ ಮೂಲದ ಆಳುಗಳಾಗಿ, ಅವರ ಕಾಡುಗುಡ್ಡಗಳಲ್ಲಿರುವ ಮರಮುಟ್ಟು, ತೋಟಗಳು ಕೆಲಸಗಾರರಾಗಿಯೂ ಜಿಲ್ಲೆಯ ದಲಿತರು ಜೀವಿಸಿಕೊಂಡಿದ್ದರು. ಅವರನ್ನು ಮುಟ್ಟುವುದು ಪಾಪವೆಂದು ಪರಿಗಣಿತವಾಗಿತ್ತು. ಅವರೆಲ್ಲ ಅಸ್ಪೃಶ್ಯರೆಂದೇ ಬಹಿಷ್ಕೃತರಾಗಿದ್ದರು. ಜಮೀನಿದ್ದ ಒಡೆಯರ ಗುತ್ತು ಚಾವಡಿಗಳಲ್ಲಿ ನಿತ್ಯ ಚಾಕರಿಗೆ, ಜಾನುವಾರುಗಳ ಪೋಷಣೆಯ ಕೆಲಸಗಳಗೆ, ಮನೆಯ ಕೆಲಸಗಳಗೆ ನಿತ್ಯದ ಜೀತದ ಆಳುಗಳಾಗಿ ದುಡಿಯುತ್ತಾ ಇದ್ದರು. ಅವರು ವಾಸಕ್ಕೆ ದನಿಗಳ ಜಮೀನಿನ ಸಮೀಪದ ಓಣಿಗಳಲ್ಲಿಯೋ, ಪಕ್ಕದ ಗುಡ್ಡಗಾಡುಗಳ ತಪ್ಪಲುಗಳಲ್ಲಿಯೋ ಕತ್ತರಿ ಇಲ್ಲವೇ ಕಮಾನಿನ ಆಕಾರದ ಹುಲ್ಲುಗುಡಿಸಲನ್ನು ಕಟ್ಟಿಕೊಂಡು ಬದುಕುತ್ತಿದ್ದರು. ಅಸ್ಪೃಶ್ಯತೆಯಿಂದಾಗಿ ಇವರು ತೀರ ಅನಾಗರಿಕವಾಗಿ ಆಯಾಯ ಜಾತಿ ನೀತಿ, ಶಿಸ್ತುಬದ್ಧವಾದ ಕಟ್ಟು ಕಟ್ಟಳೆಯ ಸಮಾಜದ ನೀತಿಗನುಸಾರವಾಗಿ ಜೀವನ ನಡೆಸುತ್ತಿದ್ದರು.[1]

ಇನ್ನು ಕೆಲವರು ಕಾಡುಗುಡ್ಡೆಗಳಲ್ಲಿ ತಿರುಗಾಡಿಕೊಂಡು ಕಾಡುಮೃಗಗಳನ್ನು ಬೇಟೆಯಾಡಿ ಅವುಗಳ ಚರ್ಮದಿಂದ ಕೈಚೀಲ, ಪಾದರಕ್ಷೆ ಹಾಗೂ ಸೊಂಟದ ಪಟ್ಟಿಗಳನ್ನು ಒರಟು ಒರಟಾಗಿ ಮಾಡಿಕೊಂಡು ಪ್ರಾಣಿ-ಪಕ್ಷಿಗಳ ಎಲುಬುಗಳಂದ ಕೈ ಬಳೆ ಮತ್ತು ಇತರ ಆಭರಣಗಳನ್ನು ಮಾಡಿಕೊಂಡು ಧರಿಸುತ್ತಿದ್ದರು. ಕಾಡಿನಲ್ಲಿ ಸಿಗುವ ಬಳ್ಳಿ, ಬಿದಿರುಗಳಂದ ಬುಟ್ಟಿ,ಗರಸೆ, ಹುರಿ ಹಗ್ಗ ಹುರಿ, ಚಾಪೆ ಇತ್ಯಾದಿಗಳನ್ನು ಮಾಡಿ ಅವನ್ನು ಮಾರಿ ಬಹು ಬಡತನದಿಂದ ಪ್ರಾಣಿಗಳಂತೆ ಅಲ್ಲಲ್ಲಿ ಅಲೆದಾಡಿಕೊಂಡು ಜೀವಿಸುತ್ತಿದ್ದರು.

ದೇಶದಲ್ಲಿ ಬದಲಾವಣೆ ಕಂಡು ಜನರ ಸ್ಥಿತಿ-ಗತಿ, ರಾಜಕೀಯ ಪರಿಸ್ಥಿಯೂ ಮಾರ್ಪಾಟಾಯಿತು., ದಕ್ಷಿಣ ಕನ್ನಡ ಜಿಲ್ಲೆ ಸೇರಿದಂತೆ ಕರಾವಳಿ ಭಾಗದಲ್ಲಿ ಅನಾದಿಕಾಲದಿಂದ ಆಳ್ವಿಕೆ ನಡೆಸುತ್ತಿದ್ದ ಅಳುಪರು, ಜೈನ ಅರಸರು, ಚೌಟರು, ಬಂಟರು ಮತ್ತು ಬಲ್ಲಾಳರ ಆಡಳಿತದಲ್ಲಿಯೂ ಅವರ ರಾಜನೀತಿಯಲ್ಲಿಯೂ ಬದಲಾವಣೆ ಕಂಡಿತು. ಸ್ಥಳೀಯ ಅರಸರ ದೌರ್ಬಲ್ಯದಿಂದ ಮೈಸೂರು

ಕಡೆಯ ಅರಸರ ಕೈವಶವಾಗಿದ್ದ ತುಳುವ ಪ್ರದೇಶ 1799ರಲ್ಲಿ ನಾಲ್ಕನೇ ಮೈಸೂರು ನಿರ್ಣಾಯಕ ಯುದ್ಧದಲ್ಲಿ ಬ್ರಿಟಿಷರ ವಶಕ್ಕೆ ಬಂದಿತು. ಬ್ರಿಟಿಷರು ಕೆನರಾ ಜಿಲ್ಲೆ ಎಂದು ಗುರುತಿಸಿದ ಕರಾವಳಿ ಪ್ರದೇಶಕ್ಕೆ ಥಾಮಸ್ ಮನ್ರೋ ಮೊಟ್ಟಮೊದಲ ಕಲೆಕ್ಟರ್ ಆಗಿ ಮದ್ರಾಸಿನ ಕಂಪೆನಿ ಸರ್ಕಾರದಿಂದ ನಿಯೋಜಿತನಾದನು. 1857 ರ ಸಿಪಾಯಿ ದಂಗೆಯ ನಂತರ ದೇಶದಾದ್ಯಂತ ಬ್ರಿಟೀಷ್ ವಿಕ್ಟೋರಿಯಾ ರಾಣಿಯ ಹೆಸರಿನಲ್ಲಿ ಬ್ರಿಟಿಷ್ ಆಡಳಿತ ಬಂದಿತು. ಕೆನರಾ ಜಿಲ್ಲೆಯೂ ಕಂಪೆನಿ ಆಡಳಿತದಿಂದ ಬ್ರಿಟಿಷ್ ರಾಣಿಯ ಸರ್ಕಾರಕ್ಕೆ ಸೇರಿಕೊಂಡಿತು.

ಬ್ರಿಟಿಷ್ ಸರ್ಕಾರದ ಕಡೆಯಿಂದ ಜಿಲ್ಲೆಯಲ್ಲಿ ಅಸ್ಪೃಶ್ಯರನ್ನು ಉದ್ದೇಶಿಸಿದ ಕೆಲವು ಯೋಜನೆಗಳು ಜಾರಿಗೆ ಬಂದವು. ಅದೇ ಮೊದಲ ಬಾರಿಗೆ ದಲಿತ ವರ್ಗದ ಹೆಸರಿನಲ್ಲಿ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಡಿಪ್ರೆಸ್ಡ್ ಕ್ಲಾಸಸ್ (ದಲಿತ ವರ್ಗ) ಎಂದು ಈ ಸಮುದಾಯವವನ್ನು ಕರೆಯಲಾಯಿತು. ಈ ಪದವನ್ನೇ ಕುದ್ಮುಲ್ ರಂಗರಾವ್ ಅವರು ತಮ್ಮ ಸಮುದಾಯ ಸೇವಾ ಸಂಸ್ಥೆಗೆ ಬಳಸಿಕೊಂಡರು.

ಸರ್ಕಾರದ ಕಡೆಯಿಂದ ಸುಧಾರಣೆಯ ಕೆಲಸಗಳು ಆರಂಭವಾದರೂ ಒಟ್ಟು ಸಮಾಜದ ಒಳಗಡೆ ಸೇರಿಹೋಗಿದ್ದ ನಂಬಿಕೆಗಳು ಉಳ್ಳವರ ಹಾಗೆ ದಲಿತರ ನಡುವಿನ ಅಂತರವನ್ನು ಕಡಿಮೆ ಮಾಡಲಿಲ್ಲ. ಜಾತೀಯತೆಯ ಕಟ್ಟುಪಾಡುಗಳು ಇಡೀ ಸಮಾಜವನ್ನು ಬಂಧಿಸಿದ್ದವು. ಹುಟ್ಟಿನಿಂದಲೇ ಸಮೂಜದಲ್ಲಿ ಮೆಲು ಕೀಳನ್ನು ನಿರ್ಧರಿಸುವುದು ಆಳವಾಗಿ ಬೇರುಬಿಟ್ಟ ಸಂಗತಿಯಾಗಿತ್ತು ಅದನ್ನು ಪುರಾಣ, ಪುಣ್ಯಕಥೆಗಳ ಆಧಾರಗಳಲ್ಲಿ ಉಳಿಸಿಕೊಳ್ಳಲಾಗುತ್ತಿತ್ತು. ಬ್ರಿಟಿಷರು ಆರಂಭಿಸಿ ಸರ್ವರಿಗೂ ಶಿಕ್ಷಣ ನೀಡುವ ಅವಕಾಶವನ್ನು ಬಳಸಿಕೊಂಡು ಸಂಘಟಿತರಾಗಿವುದಕ್ಕೆ ಆಸ್ಪದವೇ ಇಲ್ಲದಂತೆ ದಲಿತ ವರ್ಗದಲ್ಲೂ ಅಸಂಖ್ಯಾತ ಒಳ ಗುಂಪುಗಳು ಪರಸ್ಪರ ಪೈಪೋಟಿಯಲ್ಲಿ ಇರುವಂತೆ ಇಡೀ ಸಮಾಜ ವ್ಯವಸ್ಥೆ ಮೋಡಿಕೊಳ್ಳುತ್ತಿತ್ತು. ದಲಿತರಲ್ಲಿ ಅನೇಕ ಒಳಜಾತಿಗಳಿದ್ದು ಅವೆಲ್ಲವೂ ಅಸ್ಪೃಶ್ಯರಾಗಿಯೇ ಉಳಿದಿದ್ದವು.

ಬ್ರಿಟಿಷರು ಆರಂಭಿಸಿದ ಕೆಲವಾದರೂ ಸುಧಾರಣಾ ಕ್ರಮಗಳಿಂದ ಅಷ್ಟಿಷ್ಟು ಕಲಿತ ಈ ದಲಿತ ವರ್ಗದ ಯುವಕರಲ್ಲಿ ಹಿಂದಿನ ಮೂಢಭಾವನೆ, ಅಂಧ ಶ್ರದ್ಧೆಗಳನ್ನು ಪ್ರತಿಭಟಿಸುವ ಮನೋಭಾವ ರೂಪುಗೊಂಡರೂ ಅವರ ಸಮಾಜಗಳಲ್ಲಿದ್ದ ಹಿರಿಯರು ಅದಕ್ಕೆ ಮಣೆ ಹಾಕುತ್ತಿರಲಿಲ್ಲ.[2]. ಅದರಂತೆ "ದಲಿತ ವರ್ಗದ ಎಲ್ಲ ಒಳಪಂಗಡಗಳಲ್ಲಿನ ಹಿಂದಿನಿಂದ ನಡೆದುಕೊಂಡು ಬಂದಿದ್ದ ನೀತಿ ನಿಯಮ, ಕಟ್ಟು ಕಟ್ಟಳೆಗಳಿಗೆ ಅತ್ಯಂತ ಪ್ರಾಮುಖ್ಯತೆ ಕೊಡುತ್ತಿದ್ದರು. ಜಾತಿಯ ನೀತಿ ನಿಯಮಗಳನ್ನು ಪ್ರಾಮಾಣಿಕವಾಗಿ ಆಚರಿಸುವುದರಲ್ಲಿ ಹಿರಿಯ ಬಳಗದವರು ಒಂದಿಷ್ಟೂ ತಪ್ಪುತ್ತಿರಲಿಲ್ಲ. ಆಯಾಯ ಉಪಜಾತಿಗಳ ಮುಖ್ಯಸ್ಥರಾದ ಗುರಿಕಾರ, ಮುಖಾರಿ, ಗುರ್ಕೆ, ಬುದ್ಧಿವಂತ, ಯಜಮಾನ ಮುಂತಾದವರು ಅತೀ ಜಾಗರೂಕತೆಯಿಂದ ತಮ್ಮ ಕರ್ತವ್ಯವನ್ನು ಪಾಲಿಸುತ್ತಿದ್ದರು. ಇದರಿಂದಾಗಿ ಜಿಲ್ಲೆಯ ಹರಿಜನ ಗಿರಿಜನ ವರ್ಗದವರಲ್ಲಿ ಕೂಡ ಹಿಂದಿನಿಂದ ಬೆಳೆದು ಬಂದ ಕಟ್ಟು ಕಟ್ಟಳೆ, ರೀತಿ ನೀತಿಯ ಬಿಗುಧೋರಣೆಗಳಿಂದಾಗಿ ತಮ್ಮ ತಮ್ಮಲ್ಲಿ ಮೇಲು – ಕೀಳು, ಆ ಜಾತಿ ಈ ಜಾತಿ ಎಂಬ ಭೇದ ಭಾವ ಹಾಗೂ ವಿವಿಧ ಉಪಜಾತಿಗಳುಂಟಾಗಲು ಕಾರಣವಾದವು.[3] ಮಾತ್ರವಲ್ಲಿ, ಒಂದು ಉಪಜಾತಿಯವರು ಇನ್ನೊಂದು ಉಪಜಾತಿಯವರ ಜೊತೆ ಹೆಣ್ಣು ಗಂಡು ಸಂಬಂಧ ಬೆಳೆಸುವ ಸಂಪ್ರದಾಯವೂ ಅವರಲ್ಲಿ ಸಮಾಜಬಾಹಿರವೆನಿಸಿತು.

ಉನ್ನತ ಸರ್ಕಾರಿ ಹುದ್ದೆ ಪಡೆದವರಲ್ಲಿಯೂ ಈ ತರದ ಜಾತೀಯ ಮನೋವೃತ್ತಿ ಇರುವುದು ಅಲ್ಲಲ್ಲಿ ಕಂಡು ಬರುತ್ತದೆ. ವಿದ್ಯಾವಂತನಾದ ದಲಿತ ಯುವಕನು ತಾನು ಮೆಚ್ಚಿ ಮೋಹಿಸಿದ ಪ್ರಾಯಕ್ಕೆ ಬಂದ ಇನ್ನೊಂದು ಉಪಜಾತಿಯ ದಲಿತ ಯುವತಿಯನ್ನು ಮದುವೆಯಾಗಲು ಕೂಡ ಸಮಾಜದ ಕಟ್ಟುಕಟ್ಟಳೆಗಳು ವಿರೋಧವಾಗಿದೆ. ಸಮಾಜದ ಹಿರಿಯರು ಇಂಥ ಸಂಬಂಧಗಳನ್ನು ಬಲವಾಗಿ ವಿರೋಧಿಸುತ್ತಾರೆ. ಅದರಲ್ಲಿ ಮುಂದುವರಿದರೆ ಅವರನ್ನು ಸಮಾಜದಿಂದಲೇ ಹೊರಹಾಕುವುದು ಹಿಂದೆ ಇರುವಂತೆಯೇ ಈಗಲೂ ಕೆಲವೆಡೆ ನಡೆಯುತ್ತದೆ.

ಹರಿಜನ ಗಿರಿಜನರ ಉಪಜಾತಿಗಳಲ್ಲಿ ಇರುವಂತೆ ಒಂದೇ ಗೋತ್ರಕ್ಕೆ ಸೇರಿದ ಗಂಡು ಹೆಣ್ಣುಗಳೊಳಗೆ ಇಲ್ಲವೇ ಹಿಂದೆ ಒಂದೇ ಬಳ್ಳಿಗೆ ಸೇರಿದವರಿಗೆ ಹುಟ್ಟಿರುವವರೊಂದಿಗೆ ಮದುವೆ ಸಂಬಂಧ ಒಂದು ವೇಳೆ ನಡೆದರೆ ಅಂಥವರನ್ನು ಜಾತಿಯಿಂದಲೇ ಬಹಿಷ್ಕಾರ ಹಾಕುವ ಪದ್ಧತಿ ಬಳಕೆಯಲ್ಲಿದೆ. ಅದಕ್ಕೆ ಪರಿಹಾರ ರೂಪವಾಗಿ ಕೆಲವು ಕ್ರಮಗಳನ್ನೂ ರೂಪಿಸಲಾಗಿದೆ. ದೂರದ ಕಾಡಿನಲ್ಲಿ ಕತ್ತರಿ ಆಕಾರದ ಬೈಹುಲ್ಲಿನ ಗುಡಿಸಲು ಕಟ್ಟಿ ಗಂಧ ಬೆರೆಸಿದ ನೀರನ್ನು ತಪ್ಪಿತಸ್ಥರ ತಲೆಗೆ ಹೊಯ್ದು, ಗುಡಿಸಲಿಗೆ ಬೆಂಕಿಕೊಟ್ಟು ಗುಡಿಸಲ ಒಳಗಿಂದ ಬಹಿಷ್ಕೃತ ಹೆಣ್ಣು ಇಲ್ಲವೇ ಗಂಡು ಒಂದು ಕಡೆಯಿಂದ ಪ್ರವೇಶಿಸಿ ಇನ್ನೊಂದು ಕಡೆಯಿಂದ ಹೊರಕ್ಕೆ ಬರುವಾಗ ಅವರಿಗೆ ಕೋಲುಗಳಿಂದ ಹೊಡೆದು ಶಿಕ್ಷೆ ನೀಡಿದ ನಂತರ ಅವರ ಮೊದಲಿನ ಜಾತಿಗೆ ಸೇರಿಸಕೊಳ್ಳುವುದು ಈ ಪರಿಹಾರ ಸೂತ್ರ.

ಸ್ಥೂಲವಾಗಿ ಹರಿಜನರು ಪರಿಶಿಷ್ಟ ಜಾತಿ ಗಿರಿಜನರು ಪರಿಶಿಷ್ಟ ಬುಡಕಟ್ಟು ಈಚಿನ ವರ್ಷಗಳಲ್ಲಿ ಹರಿಜನ ಎಂಬುದನ್ನು ಬಳಸುವುದಕ್ಕೆ ವಿರೋಧ ವ್ಯಕ್ತವಾಗಿರುವುದರಿಂದ ಪರಿಶಿಷ್ಟ ಜಾತಿ ಎಂಬುದೇ ಸಾರ್ವತ್ರಿಕವಾಗಿ ಒಪ್ಪಿಕೊಂಡಿರುವ ಹೆಸರಾಗಿದೆ. ಈ ಪರಿಶಿಷ್ಟ ಜಾತಿಗೆ ಒಳಪಟ್ಟಂತೆ ನೂರಾರು ಉಪಜಾತಿಗಳಿವೆ. ಏಕೀಕರಣವಾದ ನಂತರ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿಯೂ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟು ಪಂಗಡಗಳಿವೆ. ಆದರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ಉಪಜಾತಿಗಳ ಸಂಖ್ಯೆ ಹೆಚ್ಚು.

- <u>ಪರಿಶಿಷ್ಟ ಜಾತಿಗೆ ಸೇರಿದ ಉಪಜಾತಿಗಳು</u>

ಆದಿ ದ್ರಾವಿಡ, ಅಜಿಲ (ಇವರಿಗೆ ಈಗಿನ ಪುತ್ತೂರು ಮತ್ತು ಸುಳ್ಯದ ಕಡೆ ಅಜಿಲೆರ್ ಎಂದು ಕರೆಯಲಾಗುತಿದೆ.). ಬೈರ, ಬಾಕುಡ, ಚಮ್ಮಾರ್ ಅಥವಾ ಮುಚಿ, ಡೋಮ್ (ಡೊಂಬರ, ಬೈಡಿ ಅಥವಾ ಪಾನೊ–ಕುಂದಾಪುರದ ಕಡೆ ನಲ್ಕೆಯವರನು ಪಾನೋ ಅಥವಾ ಕೂಸ (ಕುಂದಾಪುರದ ಕಡೆ ಹರಿಜನರನ್ನು ಕೂಸಲರು ಎಂದು ಕರೆಯಲಾಗುತ್ತದೆ.) ಮಾದಿಗೆ, ಮಾಯಿಲ, ಮೊಗೆರ್,

ಮುಂಡಾಲ, ಪಂಬದ, ರಾಣೆಯಾರ್, ಸಮಗಾರ, ತೋಟಿ, ಬತ್ತಡ (ಕುಂದಾಪುರದ ಕಡೆ ಇವರನ್ನು ಬಾಕುಡ ಎಂದು ಕರೆಯಲಾಗುತ್ತದೆ.) ಹಸಲ, ನಲ್ಕದಾಯ ಮತ್ತು ಪರಯನ್.

<u>ಜಿಲ್ಲೆಯಲ್ಲಿ ಪರಿಶಿಷ್ಟ ಬುಡಕಟ್ಟು ವಿಭಾಗಕ್ಕೆ ಸೇರಿದವರು :</u> ಕೊರಗ, ಕುಡಿಯ ಅಥವಾ ಮಲೆಕುಡಿಯ ಮತ್ತು ಮರಾಠಿ. ಕೊರಗರು ಕರಾವಳ ಪ್ರದೇಶದಲ್ಲಿಯೇ ಆದಿಯ ಮೂಲನಿವಾಸಿಗಳು ಎಂಬುದು ಮಾನವಶಾಸ್ತ್ರಜ್ಞರ ಅಭಿಮತ ಇವರನ್ನು ಮದ್ರಾಸ್ ಸರ್ಕಾರ ಪರಿಶಿಷ್ಟ ಜಾತಿಗೆ ಸೇರಿಸಿತ್ತು. ನಾಡಿನ ಏಕೀಕರಣವಾಗಿ ಕರ್ನಾಟಕದಲ್ಲಿ ಕರಾವಳಿಯ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು ಸೇರಿದಾಗ ಕೊರಗರನ್ನು ಪರಿಶಿಷ್ಟ ಬುಡಕಟ್ಟಿಗೆ ಸೇರಿಸಲಾಯಿತು. ಇವರಷ್ಟು ನಿಕೃಷ್ಟ ಸ್ಥಿತಿಯಲ್ಲಿ ಕಡು ಬಡತನದಲ್ಲಿ ಮತ್ತು ಅನಾಗರಿಕ ಸ್ಥಿತಿಯಲ್ಲಿ ಜೀವಿಸುವ ಪರಿಶಿಷ್ಟ ಜಾತಿ ಇಲ್ಲವೇ ಪರಿಶಿಷ್ಟ ಪಂಗಡದವರು ಯಾರೂ ಇಲ್ಲ. ಇವರನ್ನೇ ಕುದ್ಮುಲ್ ರಂಗರಾವ್ ಅವರ ತಮ್ಮ ಪಾರ್ಥಿವ ಶರೀರವನ್ನು ರುದ್ರಭೂಮಿಗೆ ಕೊಂಡೊಯ್ಯುವಂತೆ ತಮ್ಮ ಉಯಿಲನಲ್ಲಿ ಕೇಳಕೊಂಡಿದ್ದು. ಆದಿವಾಸಿ ಕೊರಗ ಸಮುದಾಯಕ್ಕೆ ಹೆಚ್ಚಿನ ಸಹಾಯ ಮಾಡಲಾಗಲಿಲ್ಲ ಎಂಬ ಕೊರಗು ಅವರಲ್ಲಿ ಉಳದದ್ದೇ ಆ ಬೇಡಿಕೆಗೆ ಕಾರಣ. ಕೊರಗರು ತಮ್ಮ ಪಾರ್ಥಿವ ಶರೀರವನ್ನು ಮುಟ್ಟಿದಾಗ ತಮ್ಮ ಆತ್ಮಕ್ಕೆ ಶಾಂತಿ ಸಿಗಬಹುದು ಎಂದು ಆ ಮಹಾನುಭಾವ ಆಶಿಸಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಪರಿಸ್ಥಿತಿಯಲ್ಲಿ ದಲಿತರ ಪಂಗಡಗಳು ಪ್ರತ್ಯೇಕ ಜಾತಿಗಳಾಗಿ ತಮ್ಮ ತಮ್ಮ ಹಿಂದಿನ ಪದ್ಧತಿಗಳನ್ನು ಸಂಪ್ರದಾಯದ ಹೆಸರಿನಲ್ಲಿ ಕಟ್ಟುನಿಟ್ಟಾಗಿ ಪಾಲಿಸುತ್ತಾ ಇದ್ದುದ್ದು ಅವುಗಳ ಹಿಂದುಳದಿರುವಿಕೆಗೆ ಕಾರಣವೆನ್ನಬಹುದು ಗಂಗೊಳ್ಳಿಯಿಂದ ನೀಲೇಶ್ವರದವರೆಗೆ ಇಪ್ಪತ್ತಕ್ಕೂ ಹೆಚ್ಚಿನ ನದಿಗಳು ಪಶ್ಚಿಮಕ್ಕೆ ಹರಿಯುವುದು ಈ ಜಿಲ್ಲೆಯ ಪ್ರಾದೇಶಿಕ ಲಕ್ಷಣ. ದೇಶಕ್ಕೆ ಸ್ವಾತಂತ್ರ್ಯ ಬರುವವರೆಗೆ ಈ ಎಲ್ಲಾ ನದಿಗಳಗೂ ಸೇತುವೆಗಳ ನಿರ್ಮಾಣ ಆಗಿರಲಿಲ್ಲ. ಬ್ರಿಟಿಷರ ನೇರ ಆಳ್ವಿಕೆ ಆರಂಭವಾದ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಇಪ್ಪತ್ತನೆಯ ಶತಮಾನದ ಆರಂಭದ ವರೆಗೆ ಸಂಚಾರಕ್ಕೆ ಮಾರ್ಗಗಳೇ ಇರಲಿಲ್ಲ. ಒಂದು ನದಿಯನ್ನು ದಾಟಿ ಇನ್ನೊಂದು ಕಡೆ ಹೋಗಬೇಕೆಂದಿದ್ದರೆ ದೋಣಿಯನ್ನೇ ಅವಲಂಬಿಸಬೇಕಾಗಿತ್ತು.

ಸಾರಿಗೆಗೆ ಯಾವ ಆಧುನಿಕ ಸೌಲಭ್ಯವೂ ಇರದ ಆ ದಿನಗಳಲ್ಲಿ ಒಂದೊಂದು ಕಡೆ ನೆಲೆಸಿದ್ದ ದಲಿತ ಪಂಗಡಗಳು ತಮ್ಮದೇ ಪ್ರತ್ಯೇಕ ಕಟ್ಟು ಕಟ್ಟಳೆಗಳನ್ನು ರೂಪಿಸಿಕೊಂಡು ಕಟ್ಟಾ ಸಂಪ್ರದಾಯವಾದಿಗಳಂತೆ ಇದ್ದುದರಲ್ಲಿ ಆಶ್ಚರ್ಯವಿಲ್ಲ. ಅದನ್ನು ಪೋಷಿಸಿಕೊಂಡು ಬರುವಂತೆ ಆಯಾ ಸಮುದಾಯಗಳ ಹಿರಿಯರಯ ನೋಡಿಕೊಳ್ಳುತ್ತಾ ಇದ್ದುದರಿಂದ ಅಂಥ ಶ್ರದ್ಧೆ. ಮೌಢ್ಯಾಚಾರಣೆಗಳು ಈ ಸಮುದಾಯವನ್ನು ಸುಧಾರಣೆಯ ಅಲೆಗೆ ಸಿಲುಕದಂತೆ ಮಾಡಿರುವದನ್ನು ಕಡೆಗಣಿಸಲಾಗದು.

ಜಿಲ್ಲೆಯ ಆದಿವಾಸಿ ಪಂಗಡಗಳು ಕೊರಗರು ಅದ್ಯರು. ಎಲ್ಲ ತಾಲೂಕಿನ ಸ್ಥಳಗಳಲ್ಲಿಯೂ ಗುಡ್ಡ ಗಾಡುಗಳ ಬಯಲು ತಪ್ಪಲಲ್ಲಿಯೂ ಮತ್ತು ಅಲ್ಲಲ್ಲಿ ಪೇಟೆ ಪಟ್ಟಣಗಳ ಗುಡ್ಡಗಳ ಬದಿಯಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಾರೆ. ಮಂಗಳೂರು ನಗರದ ದೇರೆಬೈಲು, ಕಂಕನಾಡಿಯ ಕುದ್ಕೋರಿಕಟ್ಟೆ, ಮರವೂರು, ಬಜಪೆ, ಬೈಕಂಪಾಡಿ, ಹಳೆಯಂಗಡಿ, ಮೂಲ್ಕಿ, ಕಿನ್ನಿಮೂಲ್ಕಿ ಮುಂತಾದ ಕಡೆಗಳಲ್ಲಿ ಕೆಲವು ಕುಟುಂಬಗಳು ನೆಲೆಸಿವೆ. ಉಡುಪಿ ಪೇಟೆ, ಕುಂದಾಪುರ, ಪುತ್ತೂರು, ಕಾರ್ಕಳ ಬಂಟ್ವಾಳ ಕಡೆಯ ಹಳ್ಳಿಗಾಡುಗಳಲ್ಲಿಯೂ ಇವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಉಡುಪಿಯಲ್ಲಿ ಕೊರಗರ ಕೇರಿ ಎಂಬ ವಸತಿ ಪ್ರದೇಶವೇ ಇದೆ. ಬಜಪೆಯ ಹತ್ತಿರ ಕೊರಗ ಎಂಬ ಹೆಸರಿನ ಊರು ಇತ್ತೆಂದೂ ಅದು ಪ್ರಾಚೀನ ಕಾಲದಿಂದ ಕೊರಗರು ನೆಲೆಸಿದ ಪ್ರದೇಶವೆಂದೂ ಕೆಲವು ಇತಿಹಾಸಜ್ಞರು ತಿಳಿಸಿದ್ದಾರೆ. ಕೊರಗರ ಪ್ರಾಚೀನತೆಯನ್ನು ಕುರಿತಾಗಿ ಐತಿಹ್ಯವೂ ಇದೆ.

ಗುಡ್ಡಗಾಡುಗಳಲ್ಲಿ ನೆಲೆ ಕಂಡುಕೊಂಡಿದ್ದ ಕೊರಗರು ಪೇಟೆ ಪಟ್ಟಣಗಳಿಗೆ ಇಲ್ಲವೇ ಗ್ರಾಮದ ಸಂತೆಗಳಿಗೆ ಬರಬೇಕಿದ್ದರೆ ಸ್ಥಳೀಯ ಅಧಿಕಾರಿಗಳ ಅಪ್ಪಣೆ ಪಡೆಯಬೇಕು ಎಂಬ ನಿಯಮ ರೂಢಿಯಲ್ಲಿತ್ತು.[4] ಕೊರಗರಿಗೆ ಪೇಟೆ ಪಟ್ಟಣಗಳಲ್ಲಿ ಅನೇಕ ನಿಷೇಧಗಳಿದ್ದವು. ಅವರು ಸಾರ್ವಜನಿಕ ಸ್ಥಳದಲ್ಲಾಗಲೀ, ರಸ್ತೆಗಳ ಮೇಲಾಗಲೀ ಉಗುಳಬಾರದು ಎಂಬ ನಿಷೇಧವಿತ್ತು. ಅದಕ್ಕಾಗಿ ಅವರು

ತಮ್ಮ ಕುತ್ತಿಗೆಗೆ ಒಂದು ಮಣ್ಣಿನ ಗಡಿಗೆಯಲ್ಲಿ ಉಗುಳುತ್ತಿದ್ದರು. ಹೆಣದ ಮೇಲಿನ ಬಟ್ಟೆ ಕೊರಗರಿಗೆ ಮೀಸಲಾಗಿತ್ತು. ಅದನ್ನೇ ಅವರು ಧರಿಸುತ್ತಿದ್ದರು.

ಪೇಟೆ ಪಟ್ಟಣಗಳ ಸನಿಹಕ್ಕೆ ಬರುವ ಮೊದಲು ಗುಡ್ಡಗಾಡು ಪ್ರದೇಶಗಳಲ್ಲಿ ನೆಲಸಿದ್ದ ಇವರು ಕಾಡಿನಲ್ಲಿ ಬೇಟೆಯಾಡುವುದೇ ಜೀವನ ಮಾರ್ಗವಾಗಿತ್ತು. ಪ್ರಾಣಿಗಳ ಚರ್ಮವನ್ನೂ ಎಲುಬುಗಳನ್ನೂ ಸಂಗ್ರಹಿಸಿ ಅವನ್ನು ಮಾರಿ ಜೀವನ ಮಾಡುತ್ತಿದ್ದರು. ಗುಡ್ಡದ ತಪ್ಪಲಲ್ಲಿ ವಾಸಿಸುವ ಕೊರಗರು ಕಾಡಿನ ನಾರು ಬಳ್ಳಿಗಳಿಂದ ಚಾಪೆ, ಬುಟ್ಟಿ, ಕುಕ್ಕೆ, ಹಗ್ಗ ಹುರಿಗಳನ್ನು ಮಾಡಿ ಅವನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಕಾಡಿನಿಂದ ನಾಡಿನ ಕಡೆ ಬಂದ ಇವರನ್ನು ಗ್ರಾಮ ಪಂಚಾಯ್ತಿಗಳಲ್ಲಿ ನೈರ್ಮಲ್ಯದ ಕೆಲಸಕ್ಕೆ ಸೇರಿಸಿಕೊಳ್ಳಲಾಯಿತು. ಜಮೀನ್ದಾರ ದನಿಗಳ ತೋಟಗಳಲ್ಲಿ ಜೀತದ ಆಳುಗಳಾಗಿಯೂ ದುಡಿಯತೊಡಗಿದರು. ಮೇಲು ಜಾತಿಯವರು ತಮಗೆ ಬರುವ ಅನಿಷ್ಟಗಳು ಕೊರಗರಿಗೆ ವರ್ಗಾಯಿಸುವ ಹೀನ ಪದ್ಧತಿಯನ್ನು ಜಾರಿಗೆ ತಂದರು. ಬಾಣಂತಿಯರಿಗೆ ಬರುವ ಸನ್ನಿ, ಹಸುಗೂಸುಗಳಿಗೆ ಬರುವ ಬಾಲಗ್ರಹ ನಿವಾರಣೆಗಾಗಿ ಅವರ ಎಂಜಲು, ಉಗುರು, ಕೂದಲು ಸೇರಿಸಿದ ಊಟವನ್ನು ಕೊರಗ ಹೆಂಗಸರಿಗೆ ಕೊಟ್ಟರೆ ಅವರು ಇವರಿಗೆ ಬರುವ ಅನಿಷ್ಟಗಳನ್ನು ತಪ್ಪಿಸುತ್ತಾರೆ ಎಂಬ ನಂಬಿಕೆಯಿದೆ. ಜತೆಗೆ ಅಜಲು ಎಂಬ ಒತ್ತಯದ ಕೆಲಸ ಹೇರಿಕೆ (ಶುಭಾಶುಭ ಸಂದರ್ಭಗಳಲ್ಲಿ ಕೊರಗರು ಡೋಲು ಬಾರಿಸುವುದು, ರಾತ್ರಿ ಜಾಗರಣೆ ಇತ್ಯಾದಿ) ಕರಾವಳಿಯಲ್ಲಿ ಇಂದಿಗೂ ನಿವಾರಿಸಲಾಗದ ಸಾಮಾಜಿಕ ಪಿಡುಗಾಗಿ ಅಸ್ಪೃಶ್ಯರ ಬದುಕಿನಲ್ಲಿ ಉಳಿಸುಕೊಂಡಿದೆ. 1999ರಲ್ಲಿ ಅಜಲು ಪದ್ಧತಿಯನ್ನು ಅದನ್ನು ಕರ್ನಾಟಕ ಸರ್ಕಾರ ನಿಷೇಧಿಸಿದೆ. ಆದರೂ ಅದು ಗುಪ್ತವಾಗಿ ಉಳಿದುಕೊಂಡಿದೆ. ಪ್ರಾಯಶಃ ಕೊರಗರು ಇರುವವರೆಗೂ ಅದು ಉಳಿದುಬಿಡುವ ಅನಿಷ್ಟ ಪದ್ಧತಿಯಂತೆ ತೋರುತ್ತದೆ.

ಗುಡ್ಡಗಾಡುಗಳಲ್ಲಿಯೇ ನೆಲೆಸಿ ಕೊರಗರಂತೆಯೇ ಜೀವನ ಸಾಗಿಸುತ್ತಿರುವ ಮಲೆಕುಡಿಯರು ಬೆಳ್ತಂಗಡಿ ತಾಲ್ಲೂಕಿನ ಶಿಶಿಲ, ಧರ್ಮಸ್ಥಳ, ನೆರೆಯ ಮುಂತಾದ ಕಡೆ ಇರುವ ಆದಿವಾಸಿ ಮೂಲನಿವಾಸಿಗಳು. ಕಾರ್ಕಳ ತಾಲ್ಲೂಕಿನ ಮೇಲೆ ಕಾಡುಗಳಲ್ಲಿಯೂ ಇವರ ಕೆಲವು

ಕುಟುಂಬಗಳವೆ. ಇವರ ಮುಖಂಡನಿಗೆ ಗುರಿಕಾರ, ಬುದ್ಧಿವಂತ ಎಂದು ಗೌರವಿಸುತ್ತಾರೆ. ಈ ಗುರಿಕಾರನಿಗೆ ಹಿಂದಿನಿಂದ ಬಂದ ಕಟ್ಟು ಕಟ್ಟಳೆಗಳಿಗೆ ಎಳ್ಳಷ್ಟೂ ಕುಂದು ಬಾರದ ರೀತಿಯಲ್ಲಿ ನೋಡಿಕೊಳ್ಳುವ ಹೊಣೆಗಾರಿಕೆ.ಜಾತಿ ನೀತಿಗೆ ವಿರುದ್ಧವಾಗಿ ಯಾರಾದರೂ ನಡೆದುಕೊಂಡರೆ ಕೂಡಲೇ ಸಭೆ ಕರೆದು ವಿಚಾರಣೆ ನಡೆಸುತ್ತಾನೆ. ಮದುವೆ ಸಂದರ್ಭದ ನಿಯಮಗಳು ಸರಳವಾಗಿದ್ದರೂ ಹಿಂದಿನಿಂದ ಬಂದ ಕಟ್ಟಳೆಗಳನ್ನು ಸಡಿಲಗೊಳಸುವಂತಿಲ್ಲ. ಅಷ್ಟು ಕಟ್ಟುನಿಟ್ಟಿನ ಆಚರಣೆ. ಕೊರಗರಂತೆ ಇವರೂ ಅಸ್ಪಶ್ಯರು.

ಮರಾಠಿಗಳು ಕರಾವಳಿ ಜಿಲ್ಲೆಯಲ್ಲಿ ಗಿರಿಜನರಾಗಿ ಗುತಿಸಿಕೊಂಡಿರುವವರು. ಗೋವೆಯಿಂದ ವಲಸೆ ಬಂದು ಕರಾವಳಿಯ ಅಲ್ಲಲ್ಲಿ ನೆಲೆಸಿರುವರೆಂದು ಇತಿಹಾಸಜ್ಞರು ಅಭಿಪ್ರಾಯಪಡುತ್ತಾರೆ. ಇವರು ಅಸ್ಪಶ್ಯರಲ್ಲ.[5] ಜಿಲ್ಲೆಯ ಪರಿಶಿಷ್ಟ ಜಾತಿಯವರಲ್ಲಿ ಹಲವು ಉಪಜಾತಿಗಳವೆ. ಆದಿದ್ರಾವಿಡ, ಚಂಡಾಲ ಮತ್ತು ಹೊಲೆಯ ಎಂಬ ಹೆಸರು ನಿರ್ದಿಷ್ಟ ಉಪಜಾತಿಗಳನ್ನು ಸೂಚಿಸಿವುದಕ್ಕಿಂತ ಪರಿಶಿಷ್ಟ ಜಾತಿಯವರಿಗೆ ಒಟ್ಟಾಗಿ ಹೇಳುವಂತೆ ತೋರುತ್ತದೆ. ಮುಂಡಾಲರು ಮತ್ತು ಈಚಿನ ವರ್ಷಗಳಲ್ಲಿ ತೋಟಿಗಳು ತಮ್ಮನ್ನು ಆದಿ ದ್ರಾವಿಡರೆಂದು ಹೇಳಕೊಳ್ಳುತ್ತಿದ್ದಾರೆ.

ಜಿಲ್ಲೆಯ ಪುತ್ತೂರು ಮತ್ತು ಸುಳ್ಯ ಕಡೆಯಲ್ಲಿರುವ ನಲ್ಕೆಯವರನ್ನು "ಅಜಿಲರು" ಎಂದು ಕರೆಯಲಾಗುತ್ತದೆ. ಎಲ್ಲಾ ಕಡೆ ಇವರ ಕುಟುಂಬಗಳಲ್ಲ ಕುಂದಾಪುರ, ಪುತ್ತೂರು, ಸುಳ್ಯ ಕಡೆಯಲ್ಲಿ ಇದ್ದವರು. ಮಂಗಳೂರಿನ ಸೂಟರ್ ಪೇಟೆಯಲ್ಲಿ ಇವರ ಕೆಲವು ಕುಟುಂಬಗಳಿದ್ದವು. ಭೂತ, ದೈವಗಳ ಕೋಲ ಕಟ್ಟಿ ಕುಣಿಯುವುದರಲ್ಲಿ ಹಾಗೂ ನಾಟ್ಯ ನಟನೆಯಲ್ಲಿ ನಿಪುಣರಾದ ಕಾರಣ ಇವರನ್ನು ನಾಟ್ಯದವರೆಂದು ಕರೆಯಲಾಗುತ್ತದೆ. ನಾಟ್ಯಕ್ಕೆ ತುಳು ಭಾಷೆಯಲ್ಲಿ ನಲಿಕೆ ಎಂದು ಹೇಳುವುದರಿಂದ ಇವರನ್ನು ನಲಿಕೆಯವರು ಎಂದೂ ಕರೆಯಲಾಗುತ್ತದೆ. "ತೆಂಬರೆ" ಎಂಬ ಸಣ್ಣ ಡೋಲನ್ನು ಬಾರಿಸುತ್ತಾ ಅದಕ್ಕೆ ಸಣ್ಣ ಮಕ್ಕಳನ್ನು ಕುಣಿಸುತ್ತಾ ಹಣ ಸಂಪಾದಿಸುವ ಈ ಜನ ನಂಬಿಕೆಯ ವಿಷಯದಲ್ಲಿ ಯಾವತ್ತೂ ರಾಜಿ ಮಾಡಿಕೊಂಡವರಲ್ಲ.

ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಸಂಖ್ಯೆಯಲ್ಲಿರುವ ಬೈರರು ಪುತ್ತೂರು ತಾಲ್ಲೂಕಿನ ಕಾಡುಮಠ, ಪುತ್ತೂರು, ಬಂಟ್ವಾಳ, ಪಾಣಿ ಮಂಗಳೂರು ಮತ್ತು ಬೆಳ್ತಂಗಡಿ ಕಡೆಯಲ್ಲಿ ಇದ್ದಾರೆ. ಮೈಸೂರು ಸಂಸ್ಥಾನದ ಕಡೆಯಿಂದ ವಲಸೆ ಬಂದವರೆಂಬುದು ಕೆಲವರ ಅಭಿಮತ. ಬೈರ ಅರಸರ ಕಡೆಯವರೆಂಬ ಕಾರಣಕ್ಕೆ ಇವರಿಗೆ ಬೈರರು ಎಂದು ಹೆಸರಾಗಿದೆ. ಇವರು ತಾವು ಶಿವನು ಕಾಲಬೈರವನಾಗಿ ಭೂಮಿಯಲ್ಲಿ ಧರ್ಮಸಂಸ್ಥಾಪನೆಗಾಗಿ ಅವತರಿಸಿದಾಗ ಅವನ ಅನುಯಾಯಿಗಳಾದವರೆಂದು ಬೈರರ ಹಿರಿಯರು ನಂಬಿದ್ದಾರೆ. ಜಿಲ್ಲೆಯ ಇನ್ನೊಂದು ಪರಿಶಿಷ್ಟ ಜಾತಿಯ ಗುಂಪಾದ ರಾಣೆಯವರಿಗೂ ಬೈರರಿಗೂ ಅನೇಕ ವಿಷಯಗಳಲ್ಲಿ ಸಮಾನತೆ ಇದ್ದರೂ ವೈವಾಹಿಕ ಸಂಬಂಧಗಳಿಗೆ ಆಸ್ಪದವಿಲ್ಲ. ಅನ್ಯಾಯ, ಕಳ್ಳತನ, ಮೋಸ ಇವರಿಗೆ ತಿಳಿಯದು. ಭೂತ, ಪ್ರೇತಗಳಲ್ಲಿ ಅಚಲ ನಂಬಿಕೆ ಇರುವ ಬೈರರು ಕನ್ನಡವೊಂದನ್ನೇ ಬಲ್ಲವರು.

ಬಾಕುಡ ಅಥವಾ ಬತ್ತಡರು ಜಿಲ್ಲೆಯ ಪುತ್ತೂರು, ಕಾಸರಗೋಡು, ಮಂಜೇಶ್ವರ, ಮಂಗಲ್ಪಾಡಿ, ಕುಂಬಳೆ, ಮೊಗ್ರಾಲ್ ಮತ್ತು ಮೊಗ್ರಾಲ್ ಪುತ್ತೂರು ಕಡೆ ವಿರಳವಾಗಿದ್ದಾರೆ. ಕುಂದಾಪುರದ ಕಡೆಯೂ ಇವರ ಕುಟುಂಬಗಳಿವೆ. ಇವರ ಮುಖಂಡನಿಗೆ ಮುಖಾರಿ, ಜಮಾನ, ಬೊಂಡಾರಿ ಎಂದು ಹಿಂದೆ ಕರೆಯುತ್ತಿದ್ದರು. ಇವರ ಮೂಲ ದೈವ ಕೋಮರಾಯ. ಬಾಕುಡರು ನಾಗಾರಾಧಕರು. ಕೇರಳ ಕಡೆಯಿಂದ ದಕ್ಷಿಣ ಕನ್ನಡ ಜಿಲ್ಲೆಗೆ ವಲಸೆ ಬಂದು ಅಲ್ಲಲ್ಲಿ ನೆಲೆಸಿರಬೇಕೆಂದು ಇತಿಹಾಸಜ್ಞರ ಅಭಿಪ್ರಾಯವಾಗಿದೆ.

ಚಮ್ಮಾರ್ ಅಥವಾ ಮುಚಿಯವರು, ಬಹು ಹಿಂದೆ ಹೊರಗಡೆಯಿಂದ ಬಂದ ಚರ್ಮದ ಕೆಲಸಗಾರರು ಎಂಬುದು ಒಂದು ವಾದ. ಇವರು ಕನ್ನಡವನ್ನಾಗಲೀ, ತುಳುವನ್ನಾಗಲೀ ಆಡುವುದಿಲ್ಲ. ಮರಾಠಿ ಇವರ ಭಾಷೆ. ಪಾನೋ, ಪೈಡಿ ಅಥವಾ ಡೋಮ್ ಎಂಬ ಉಪಜಾತಿಯವರ ಸಂಖ್ಯೆ ಹೆಚ್ಚಿಲ್ಲ. ನಲಿಕೆಯವರಂತೆಯೇ ನೀತಿ ನಡವಳಿಕೆ ಇರುವ ಇವರನ್ನು ಕೆಲವು ಕಡೆ ಪಾಣಾರರು ಎಂದೂ ಕರೆಯಲಾಗುತ್ತದೆ. ಇವರು ಜಿಲ್ಲೆಗೆ ಹೊರಗಡೆಯಿಂದ ವಲಸೆ ಬಂದಿರಬೇಕು ಎಂಬ ಊಹೆ ಇದೆ.

ಮಂಗಳೂರು ಸೇರಿದಂತೆ ಜಿಲ್ಲೆಯ ಪಶ್ಚಿಮ ಕರಾವಳಿಯ ಹೆಚ್ಚಿನ ಊರುಗಳಲ್ಲಿ ಇರುವ ಮುಂಡಾಲರು ಮೂಲ ನಿವಾಸಿಗಳು. ಬಾರಕೂರಿನಿಂದ ನೀಲೇಶ್ವರದವರೆಗೂ ಇರುವ ವಾಸ ಸ್ಥಾನಗಳು ಹರಡಿಕೊಂಡಿವೆ. ಇವರು ಪ್ರಾಚೀನ ಕಾಲದಿಂದಲೂ ಕರಾವಳಿಯಲ್ಲಿ ನೆಲೆಸಿರುವರೆಂದು ಹೇಳಲಾಗಿದೆ. ಆ ಕಾರಣಕ್ಕೆ ಆದಿ ದ್ರಾವಿಡರೆಂದು ಕೆಲವು ಕಡೆ ಕರೆದುಕೊಳ್ಳುತ್ತಾರೆ.

ಜಿಲ್ಲೆಯಲ್ಲಿ ಅಳ್ವಿಕೆ ನಡೆಸಿದ ಜೈನ, ಅಲೂಪ ಅರಸರ, ಬಂಟರ, ಬಲ್ಲಾಳರ ಹಾಗೂ ಜಮೀನುಗಳ ಒಡೆಯರ ಮೂಲದ ಆಳುಗಳಾಗಿ ಅವರ ಜಮೀನುಗಳಲ್ಲಿ ಒಂದು ನಿಶ್ಚಿತ ಸಂಬಳಕ್ಕೆ ದುಡಿಯುವುದು ಇವರ ಮೂಲ ಕಸುಬಾಗಿತ್ತೆಂದು ತಿಳಿಸುತ್ತಾರೆ. ಅಸ್ಪೃಶ್ಯರಲ್ಲಿ ಮುಂಡಾಲ ಎನ್ನುವ ಸ್ವಾಭೀಮಾನದ ಬದುಕನ್ನು ಸಾಗಿಸಿದ ಒಂದು ಸಮುದಾಯದವು ವಿಶೇಷವಾಗಿ ಕೃಷಿ ಭೂಮಿಯಲ್ಲಿ ಮತ್ತು ದಕ್ಷಿಣ ಕನ್ನಡದಲ್ಲಿರುವ ಬಂಟ ಸಮುದಾಯದ ಒಡನಾಟದಲ್ಲಿದ್ದು ಅವರ ಕೆಲಸದಾಳುಗಳಾಗಿ ವ್ಯಕ್ತಿಯನ್ನು ತೊಡಗಿಸಿಕೊಂಡವರು. ದೈವರಾಧನೆಯನ್ನು ವಿಶೇಷವಾಗಿ ಪಾಲಿಸಿ, ಬೆಳೆದು ಬಂದ ಇವರು "ದೈವರಾಜ ಕೋಟೆದ ಬಬ್ಬುಸ್ವಾಮಿ" ಎಂಬ ದೈವವನ್ನು ನಂಬಿದವರು. ಇವರು ನೆಲೆಸಿದ ಪ್ರತಿಯೊಂದು ಕೇರಿಯಲ್ಲಿಯೂ, ಬಬ್ಬು ಸ್ವಾಮಿಯ ಪ್ರತ್ಯೇಕ ದೈವಸ್ಥಾನ ವಿರುತ್ತದೆ.



**ಕಾಪಿಕಾಡ್‌ನಲ್ಲಿರುವ ಬಬ್ಬುಸ್ವಾಮಿ ಕ್ಷೇತ್ರ**

ಈ ದೈವಕ್ಕೆ ಊರಿನ ಹತ್ತು ಸಮಸ್ತರ ಸೇರುವಿಕೆಯಿಂದ ವಾರ್ಷಿಕ ನೇಮ, ಬಲಿ, ಉತ್ಸವಗಳಿಗೆ ಇವರು ಶಕ್ತಿ ಮೀರಿ ಖರ್ಚು ಮಾಡುವರು. ತಾವು ನಂಬಿದ ಭೂತ, ದೈವಗಳ ಹಾಗೂ ದೈವಿಕ ಶಕ್ತಿಗಳ ದೇವತೆಗಳಿಗೆ ತಮ್ಮಲ್ಲಿದ್ದ ಯಾವುದೇ ವಸ್ತು ಒಡವೆ, ಬಂಗಾರ ಇತ್ಯಾದಿ ಅಮೂಲ್ಯ ವಸ್ತುಗಳನ್ನು ಒತ್ತೆ ಇಟ್ಟಾದರೂ ಕುಲದೈವಕ್ಕೆ ಸಲ್ಲುವ ವರ್ಷದ ನೇಮ, ಬಲಿ ಸಲ್ಲಲೇಬೇಕು ಅಚಲ ಭೂತಾರಾಧಕರು ಇವರು. ಅಲ್ಲದೆ, ತುಳುನಾಡಿನ ಭೂತ, ಪಂಜುರ್ಲಿ, ಗುಳಿಗ, ಧರ್ಮದೈವ, ಕಲ್ಲುರ್ಟಿ, ಚಾಮುಂಡಿ, ಕೊರತಿ, ಸಂಕಲೆಗುಳಿಗ, ಮೈಸಂದಾಯ, ಸುಬ್ಬಿಗಳಿಗ, ಕೋಮುರಾಯ, ಕೊರಗಜ್ಜ, ಕತ್ತಲೆಕಾನದ ಗುಳಿಗ ಮುಂತಾದ 39 ಭೂತಗಳು ಮಹಾಭಕ್ತರು. ಇವರಷ್ಟು ಭೂತಗಳನ್ನು ಆರಾಧಿಸುವ ಪಂಗಡ ಹರಿಜನ ಗಿರಿಜನರಲ್ಲಿ ಬೇರೊಂದು ಇಲ್ಲ.

ತಮ್ಮ ಜಾತಿಯ ನೇಮ ನಿಷ್ಠೆಗಳಿಗೆ ತುಂಬಾ ಅದ್ಯತೆ ಕೊಡುವ ಈ ಸಮುದಾಯದ ಹಿರಿಯರು ಅವುಗಳ ಪಾಲನೆಯಲ್ಲಿ ತುಂಬ ಕಟ್ಟುನಿಟ್ಟಾಗಿ ಇರುತ್ತಾರೆ.

ಇವರಲ್ಲದೆ, ಗೊಡ್ಡರು, ಕೂಸರು, ಮಾದಿಗರು, ಮಾಯಿಲರು, ಮೊಗೇರ್, ಪಂದರು, ರಾಣೆಯಾರ್, ಸಮಗಾರರು, ತೋಟಿ, ಹಸಲರು, ನಲ್ಕೆದಾರರು, ಪರಯನ್ ಎಂಬ ಹಲವಾರು ಉಪಜಾತಿಗಳು ಪರಿಶಿಷ್ಟ ಜಾತಿಗೆ ಸೇರಿವೆ. ಈ ಎಲ್ಲಾ ಉಪಜಾತಿಗಳೂ ಪ್ರತ್ಯೇಕ ಜಾತಿಗಳಂತೆ ಸಂಪ್ರದಾಯದ ಆಚರಣೆ ಕಟ್ಟುಪಾಡುಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಾ ಬಂದಿವೆ. ಇವೆಲ್ಲ ಜಾತಿಗಳಿಗೂ ಸಾಂಸ್ಕೃತಿಕ ನಂಬಿಕೆಗಳು, ಸಾಮಾಜಿಕ ಪದ್ಧತಿಗಳು ಮತ್ತು ಧಾರ್ಮಿಕ ಆಚರಣೆಗಳು ಪ್ರತ್ಯೇಕವಾಗಿವೆ. ಈ ಜಾತಿಗಳಲ್ಲಿ ಕೆಲವು ಹೊರಗಿನಿಂದ ವಲಸೆ ಬಂದು ನೆಲೆಸಿವೆ. ಕೆಲವು ಸ್ಥಳೀಯವಾಗಿ ಉಳಿದುಕೊಂಡಿವೆ. ಮುಂಡಾಲ, ತೋಟಿಯಂಥ ಪಂಗಡಗಳು ಮೂಲ ನಿವಾಸಿಗಳಾಗಿದ್ದು ಅಲ್ಲಲ್ಲಿ ಬೇರು ಬಿಟ್ಟಿವೆ. ಸಂಪ್ರದಾಯದ ಹೆಸರಿನಲ್ಲಿ ಹಿಂದಿನಿಂದ ಬಂದ ಪದ್ಧತಿಗಳನ್ನು ಕಠಿಣ ನಿಯಮಗಳಂತೆ ಪರಿಷ್ಕರಿಸುವ ಯಾವತ್ತೂ ಪ್ರಯತ್ನಗಳು ಯಶಸ್ವಿಯಾಗಿಲ್ಲ.

ಹತ್ತೊಂಬತ್ತನೆಯ ಶತಮಾನದ ಸಾರಿಗೆ ಸಂಚಾರ ವ್ಯವಸ್ಥೆಯನ್ನು ಗಮನಿಸಿದರೆ ಕುದ್ಮಲ್ ರಂಗರಾವ್‌ರು ಕಲ್ಪಿಸಿದ ಶಿಕ್ಷಣ, ಸ್ವಂತ ಉದ್ಯೋಗ ಕೈಗೊಳ್ಳಲು ಕಲ್ಪಿಸಿದ ಶಿಕ್ಷಣ, ಸ್ವಂತ ಉದ್ಯೋಗ ಕೈಗೊಳ್ಳಲು ಕಲ್ಪಿಸಿದ ತರಬೇತಿ, ವಸತಿ ಶಾಲೆಗಳಲ್ಲಿನ ಊಟೋಪಚಾರದ ಸೌಲಭ್ಯಗಳು ಮಂಗಳೂರಿನ ಸುತ್ತಮುತ್ತ ಇದ್ದ ಪರಿಶಿಷ್ಟ ವರ್ಗದ ಕೆಲವು ಉಪಜಾತಿಗಳಿಗೆ ಸಿಕ್ಕಿರುವುದನ್ನು ಗಮನಿಸಬಹುದಾಗಿದೆ.

- **ಹತ್ತೋಂಬತ್ತನೆಯ ಶತಮಾನದ ತುಳುನಾಡಿನಲ್ಲಿ ಗುಲಾಮಗಿರಿ ಪದ್ಧತಿ**

ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ಭಾರತದಂತಹ ದೇಶದಲ್ಲಿ, 'ಜಾತಿಪದ್ಧತಿ' ಅನೇಕ ಒಳಿತು ಕೆಡುಕುಗಳನ್ನು ಹೊಂದಿದೆ. ಸಾವಿರಾರು ಪಂಥ-ವರ್ಗ ವ್ಯವಸ್ಥೆ ಕೊನೆಗೆ ಜಾತಿಗಳಾಗಿ, ಒಡೆದು ಹೋಗಿರುವ ಭಾರತೀಯ ಸಮಾಜ, ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುವುದಕ್ಕೋಸ್ಕರ, ವ್ಯವಸ್ಥಿತವಾಗಿ ಜಾತಿ ವ್ಯವಸ್ಥೆಯನ್ನು ಅನುಸರಿದುತ್ತಿದೆ. ಎಂದು ಭಾಸವಾಗುತ್ತದೆ. ಬಹುಶಃ ಮೇಲು ಕೀಳು ಎಂಬ ವರ್ಗ ವಿಭಜನೆಯಿಂದ ಗುಲಾಮಗಿರಿಗೆ ತನ್ನನ್ನು ತೆರೆದುಕೊಂಡಿತು.

ಭಾರತೀಯ ಸಮಾಜ ಹೀಗೆ ಉಚ್ಚವರ್ಣಿಯರು, ನಿಮ್ನ ವರ್ಗದವರನ್ನು ತಮ್ಮ ಆಸ್ತಿಯನ್ನಾಗಿ ಮಾಡಿಕೊಂಡು ಜೀತಪದ್ಧತಿಗೆ ನಾಂದಿ ಹಾಡಿದರು. ಇದರ ಕರಾಳ ಛಾಯೆ ದೇಶದಾದ್ಯಂತ ಪಸರಿಸಿದ್ದು ಸಾವಿರಾರು ಜನರ ಬದುಕನ್ನು ಹೀನಾಯ ಸ್ಥಿತಿಗೆ ದೂಡಿದ್ದು ಇತಿಹಾಸದ ದುರಂತ. ಆಂಗ್ಲರ ಆಗಮನದ ನಂತರವೂ, ಜೀತಪದ್ಧತಿ ಬದಲಾವಣೆಗೆ ಸ್ಪಂದಿಸದೇ ಇದ್ದುದು ವಿಪರ್ಯಾಸ. ಹಾಗಿದ್ದರೂ, ಇಡೀ ಭಾರತವನ್ನು ಮುಖ್ಯ ಭೂಮಿಕೆಯನ್ನಾಗಿ ತೆಗೆದುಕೊಂಡರೆ 'ಗುಲಾಮಗಿರಿ' ಎಲ್ಲಾ ಪ್ರದೇಶಗಳಲ್ಲಿ ಏಕಪ್ರಕಾರವಾಗಿ ಹಂಚಿ ಹೋಗಿಲ್ಲ ಎಂಬುದು ತಿಳಿಯುತ್ತದೆ. ಹಾಗೇನೆ, ಜಾತಿವ್ಯವಸ್ಥೆ – ಜೀತಪದ್ಧತಿ ಒಂದೇ ತೆರನಾಗಿಲ್ಲ ಎಂಬುದು ಗಮನಾರ್ಹ, ಕರ್ನಾಟಕ ಕರಾವಳಿಯುದ್ದಕ್ಕೂ, ಭಿನ್ನ ರೀತಿಯ ಗುಲಮಗಿರಿಯನ್ನು ಗುರುತಿಸಬಹುದು.

ಈ ನಿಟ್ಟಿನಲ್ಲಿ, 19ನೇ ಶತಮಾನದಲ್ಲಿ ಕರಾವಳಿ ಪ್ರದೇಶಕ್ಕೆ ಭೇಟಿ ನೀಡಿದ ವಿದೇಶೀ ಪ್ರವಾಸಿಗರ ದಾಖಲೆಗಳು, ಅಧಿಕಾರಿಗಳ ದಾಖಲೆಗಳನ್ನು ಪರಿಸೀಲಿಸಿದಾಗ, ತುಳುನಾಡಿನಲ್ಲಿ ಅಸ್ತಿತ್ವದಲ್ಲಿದ್ದ ಗುಲಾಮಗಿರಿಗೆ ಸ್ಪಷ್ಟ ವ್ಯಾಖ್ಯಾನ ನೀಡಬಹುದೇನೋ !

ಮುಖ್ಯವಾಗಿ, ಕರಾವಳಿ ತೀರ ಪ್ರದೇಶದಲ್ಲಿ ಅಸ್ತಿತ್ವದಲ್ಲಿದ್ದಂತಹ, ಗುಲಾಮಗಿರಿ ಜಾತಿ ಪದ್ಧತಿಯೊಂದಿಗೆ ಸಮ್ಮಿಳಿತಗೊಂಡಿದೆ.. ಈ ಸಮಸ್ಯೆಯತ್ತ ನಿಖರವಾದ ದೃಷ್ಟಿಕೋನ ಬೀರಲು ಸಾಧ್ಯವಾಗದೇ ಇದ್ದರೂ, ಕೆಳಸ್ತರ ಕೃಷಿ ಕಾರ್ಮಿಕರು ಮತ್ತು ಅವರತ್ತ ಅಧ್ಯಯನ ನಡೆಸಿದಾಗ, ಆ ಕಾಲದ ಸಾಮಾಜಿಕ ರಚನೆ ಹಾಗೂ ಆರ್ಥಿಕತೆಯ ಅರಿವಾಗುವುದು. ಈ ರೀತಿಯ ಸಾಮಾಜಿಕ ಸ್ತರ ವಿನ್ಯಾಸ, ಈ ಭಾಗದಲ್ಲಿ ನೂರಾರು ವರ್ಷಗಳಿಂದ ಅಸ್ತತ್ವದಲ್ಲಿರುವುದನ್ನು ಗುರುತಿಸಬಹುದಾಗಿದೆ. ಗುಲಾಮಗಿರಿಯ ನಿರ್ಮೂಲನೆಗೆ ಜಾರಿಗೊಳಿಸಿದ ಸುಧಾರಣೆಗಳು, ಕೇವಲ ಈ ಕೆಟ್ಟ ಸಮಸ್ಯೆಯನ್ನು ಹೋಗಲಾಡಿಸುವುದಲ್ಲದೆ, ಸಾಮಾಜಿಕವಾಗಿ ಬಹಿಷ್ಕೃತಗೊಂಡ ಅತ್ಯಂತ ಕೆಳಸ್ತರ ಅಭಿವೃದ್ಧಿಯ ಸಾಧ್ಯತೆಯನ್ನು ಪ್ರತಿನಿಧಿಸುವುದು.

ಒಂದರ್ಥದಲ್ಲಿ, ಬ್ರಿಟೀಷ್ ಸಾಮಾಜಿಕ ಸುಧಾರಣೆಯು ಅಸಕ್ತಿದಾಯಕವಾಗಿರುವುದು ಏಕೆಂದರೆ, ಅದು ಆಳುವ ವರ್ಗ ಮತ್ತು ಆಳಲ್ಪಡುವವರ ನಡುವಿನ ಸಂಬಂಧದ ಕುರಿತು ಸ್ಪಷ್ಟ ಮಾಹಿತಿ ನೀಡುತ್ತದೆ. ಹಾಗೇನೆ, ಈ ಎರಡು ಗುಂಪುಗಳ ಪ್ರಭಾವವನ್ನು ಸೂಚ್ಯವಾಗಿ ತಿಳಿಸುತ್ತದೆ. ಬ್ರಿಟಿಷರ ಆಳ್ವಿಕೆಗೆ ಸ್ಥಾಪನೆ ಕೇವಲ ಪಾಶ್ಚಿಮಾತ್ಯ ಪರಿಕಲ್ಪನೆ ಮತ್ತು ಸಂಸ್ಥೆಗಳನ್ನು ವ್ಯವಸ್ಥಿತವಾಗಿ ಸ್ಥಾಪಿಸುವುದಕ್ಕೆ ಮಾತ್ರ ಸೀಮಿತವಾಗಿಲ್ಲ. ಬದಲಾಗಿ, ಮಣ್ಣಿನಲ್ಲಿ ಪ್ರಚಲಿತದಲ್ಲಿದ್ದ ಸಂಸ್ಕೃತಿ ಸಂಪ್ರದಾಯಗಳು, ಬ್ರಿಟೀಷ ಅಧಿಕಾರಿಗಳ ಮೇಲೆ ಸಾಕಷ್ಟು ಪ್ರಭಾವ ಆಗಿದೆ.

ಕಾಲ ಸರಿದು ಹೋದಂತೆ ಇಲ್ಲಿನ ವೈದಿಕ (ಹಿಂದೂ) ಸಂಸ್ಕೃತಿಯ ಕೊಡುಗೆಗಳಾದ ಸಾಮಾಜಿಕ ನೆಲೆಯಲ್ಲಿ ಆಚರಣೆಯಲ್ಲಿದ್ದ ಅನಿಷ್ಟ ಪದ್ಧತಿಗಳು, ಕ್ರೂರ ಆಚರಣೆಗಳು ಬ್ರಿಟೀಷ್

ಬುದ್ಧಿಜೀವಿಗಳ ಗಮನಕ್ಕೆ ಬಾರದೇ ಇರಲಿಲ್ಲ. ಹಾಗೂ ಹೆಚ್ಚಚ್ಚು ಭಾರತೀಯ ಸಂಸ್ಕೃತಿಯ ಅರಿವಾಗುತ್ತಿದ್ದಂತೆ, ಆಶ್ಚರ್ಯಚಕಿತರಾಗಿದ್ದರೆಂಬುದು ಉಲ್ಲೇಖನೀಯ.

ಇದನ್ನು ಗಮನದಲ್ಲಿಟ್ಟುಕೊಂಡು, ಬ್ರಿಟಿಷ್ ಆಡಳಿತ ಈ ಭಾಗದಲ್ಲಿ ನೆರವೇರಿಸಬಹುದಾದ ಯೋಜನೆಗಳನ್ನು ರೂಪಿಸಲು ಪ್ರಯತ್ನಗಳನ್ನು ಬ್ರಿಟೀಷ್ ಅಧಿಕಾರಿಗಳು ಮಾಡಿರುವುದು ಶ್ಲಾಘನಾರ್ಹ. ಸ್ಥಳೀಯ ಸಂಸ್ಕೃತಿಯೊಂದಿಗೆ ಹಸ್ತಕ್ಷೇಪ ಮಾಡದಿರುವ ನಿಯಮಗಳು ಸಡಿಲಗೊಳ್ಳುತ್ತಿದ್ದಂತೆ, ಓರಿಯಂಟಲಿಸ್ಟ್ ಸ್ಕೂಲಿಗೆ ಸೇರಿದ ಅನೇಕ ಬ್ರಿಟೀಷ್ ನಾಗರಿಕ ಸೇವೆಯಲ್ಲಿನ ಅಧಿಕಾರಿಗಳು ಇಲ್ಲಿನ ಸಂಸ್ಕೃತಿಯು ಅಧ್ಯಯನದ ಕುರಿತು ವಿಶೇಷವಾದ ಆಸಕ್ತಿ ತೋರಲು ಉತ್ಸುಕರಾದರು.

ಭಾರತದ ಉದ್ದಗಲಕ್ಕೂ ಬ್ರಿಟೀಷರ ನಿಯಂತ್ರಣ ವೃದ್ಧಿಸುತ್ತಿದ್ದಂತೆ, ಕಂಪೆನಿ ಆಡಳಿತ ರೂಪಿಸುವ ಎಲ್ಲಾ ನೀತಿಗಳ ಮೇಲೆ ಅಂಗ್ಲಿಕರ ಗುಂಪು ತನ್ನ ಪ್ರಭಾವವನ್ನು ವ್ಯಕ್ತಪಡಿಸಲು ಸನ್ನದ್ಧವಾಯಿತು. ಬಹುಶಃ ಕಂಪನಿ ಆಡಳಿತದ ಒಂದು ಮುಖ್ಯವಾದ ಲಕ್ಷಣವೆಂದರೆ, ಬ್ರಿಟೀಷರು ಸಾಮಾಜಿಕ ಪರಿವರ್ತನೆಗೆ ಸಂಬಂಧಿಸಿ ಅಭಿವೃದ್ಧಿಗೊಳಿಸಿದ ಯೋಜನೆಯ ಸಿದ್ಧಾಂತ.

**ಗುಲಾಮಗಿರಿಯ ಸ್ಥಿತಿಗತಿಗಳು** : ಆರಂಭದಲ್ಲಿ ಪ್ರಸ್ತಾಪಿಸಿದಂತೆ ಭಾರತದಂತಹ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ದೇಶದಲ್ಲಿ, ಗುಲಾಮಗಿರಿಯ ಬಗ್ಗೆ ಸ್ಪಷ್ಟ ವ್ಯಾಖ್ಯಾನ ನೀಡಲು ಸಾಧ್ಯವಾಗದು. ಜೊತೆಗೆ, ಗುಲಾಮರು ಮತ್ತು ಕಾರ್ಮಿಕರ ನಡುವಿನ ಭಿನ್ನತೆಯನ್ನೂ ಗುರುತಿಸುವುದೂ ಕಷ್ಟ ಭಾರತದಲ್ಲಿ ಗುಲಮಗಿರಿ ಅತ್ಯಂತ ಹಳೆಯ ಮತ್ತು ವ್ಯವಸ್ಥಿತವಾಗಿ ನಿರ್ಮಾಣಗೊಂಡ ಸಂಸ್ಥೆಯಾಗಿದ್ದು, ಇದನ್ನು ಬಹುತೇಕವಾಗಿ ಹಿಂದೂ ಮತ್ತು ಮುಸ್ಲಿಂ ಕಾನೂನುಗಳು ಒಪ್ಪಿಕೊಂಡಿವೆ. ಮನೆಗೆಲಸಕ್ಕೆ ಸಂಬಂಧಿಸಿದ ಗುಲಾಮಗಿರಿ ದೇಶಾದ್ಯಂತ ಅಸ್ತಿತ್ವದಲ್ಲಿದ್ದರೆ, ಕೃಷಿ ಜೀತಪದ್ಧತಿ ಕೆಲವಷ್ಟೇ ಪ್ರದೇಶಗಳಲ್ಲಿ ಹಂಚಿಹೋಗಿವೆ. ಎಲ್ಲಾ ಶ್ರೀಮಂತ ಹಾಗೂ ಮಧ್ಯಮ ವರ್ಗಗಳು ತಮ್ಮ ಮನೆ ಕೆಲಸಕ್ಕೆ ಕೆಲಸದಾಳುಗಳನ್ನು ಹೊಂದಿದ್ದರು.

ಕೆಲವು ಪ್ರಮುಖ ರಾಜವಂಶಗಳು, ಭೂ ಮಾಲೀಕರು ಹಾಗೂ ಜಮೀನ್ದಾರರು ತಮ್ಮ ಪ್ರತಿಷ್ಠೆಗಾಗಿ, ಗೌರವಕ್ಕಾಗಿ ಕೆಲಸದಾಳುಗಳನ್ನು ಗುಲಾಮರನ್ನಾಗಿ ಇರಸಿಕೊಳ್ಳುತ್ತಿದ್ದರು. ಅವರ ದೃಷ್ಟಿಯಲ್ಲಿ ಒಬ್ಬ ವ್ಯಕ್ತಿ ಹೊಂದಿರುವ ಗುಲಾಮರನ್ನಾಗಿ ಇರಿಸಿಕೊಳ್ಳುತ್ತಿದ್ದರು. ಅವರ ದೃಷ್ಟಿಯಲ್ಲಿ ಒಬ್ಬ ವ್ಯಕ್ತಿ ಹೊಂದಿರುವ ಗುಲಾಮರ ಸಂಖ್ಯೆಗೆ ಅನುಗುಣವಾಗಿ, ಆತನ ಸ್ಥಾನಮನ ಮತ್ತು ಪ್ರತಿಷ್ಠೆ ಸಮಾಜದ ಮುಖ್ಯವಾಹಿನಿಯಲ್ಲಿ ನಿರ್ಧರಿಸಲ್ಪಡುತ್ತದೆ.

ಈ ಕೆಲಸದಾಳುಗಳ ಉದ್ಯೋಗದ ಸ್ವರೂಪ ಹಾಗೂ ಸ್ಥಿತಿಗತಿಗಳು, ದೇಶದ ಎಲ್ಲಾ ಭಾಗಗಳಲ್ಲಿ ಏಕರೂಪವಾಗಿರಲಿಲ್ಲ. ಅಂದರೆ, ಈ ಆಳುಗಳು ವಾಸಿಸುತ್ತಿರುವ ಪ್ರದೇಶ ಹಾಗೂ ಬೆಳೆಯುತ್ತಿದ್ದ ಬೆಳೆಗಳಗೆ ಅನುಗುಣವಾಗಿ, ಅವರ ಪರಿಸ್ಥಿತಿಯಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಉದಾಹರಣೆಗೆ, ಮಲಬಾರ್ ಪ್ರಾಂತ್ಯದಲ್ಲಿ ವ್ಯಕ್ತಿಗತ ಮಾಲೀಕತ್ವದ ಎಸ್ಟೇಟ್‌ಗಳದ್ದು, ಈ ಜಮೀನುಗಳಲ್ಲಿ ಕೃಷಿಯನ್ನು ಅವರು ಹೊಂದಿರುವ ಜೀತದಾಳುಗಳಂದ ಮಾಡಿಸುತ್ತಿದ್ದರು. ಬಿಹಾರ್‌ನಲ್ಲಿ ಜೀತದಾಳುಗಳು ಸಣ್ಣ ಸಣ್ಣ ಭೂಮಾಲೀಕರ ಅಧೀನದಲ್ಲಿದ್ದು, ಅವರು ಭೂಮಿಯ ಕೃಷಿ ಚಟುವಟಿಕೆಗಳಗೆ ಅಂಟಿಕೊಂಡಿದ್ದರು. ಆದರೆ, ತಂಜಾವೂರಿನಲ್ಲಿ ಈ ಜೀತದಾಳುಗಳು ಸಾಮಾನ್ಯವಾಗಿ ಇಡೀ ಗ್ರಾಮ ಸಮುದಾಯಕ್ಕೆ ಸೇರಿರುತ್ತಾರೆ. ಇದನ್ನು ಗಮನಿಸಿದಾಗ, ಭಾರತದಲ್ಲಿ ಚಾಲ್ತಿಯಲ್ಲಿರುವ 'ಗುಲಮಗಿರಿ' ಎಂಬ ಪದಕ್ಕೆ ನಿರ್ದಿಷ್ಟ ವ್ಯಾಖ್ಯಾನ ನೀಡಲು ಸಾಧ್ಯವಾಗುವುದಿಲ್ಲ. ಹೀಗಾಗಿ ಇಲ್ಲಿ ಕಠೋರ ಗುಲಾಮಗಿರಿಗೂ, ನಿಯಮಕ್ಕೊಳಪಟ್ಟ ದಾಸ್ಯಪದ್ಧತಿಯ ನಡುವಿನ ಭಿನ್ನತೆಯನ್ನು ಸ್ಪಷ್ಟವಾಗಿ ಹೇಳುವುದು ಕಷ್ಟ ಅಮೇರಿಕ ಮತ್ತು ವೆಸ್ಟ್ ಇಂಡೀಸ್‌ಗಳಲ್ಲಿರುವ ಗುಲಾಮರು, ಅಲ್ಲಿಯ ಯಜಮಾನರ ಸಂಪೂರ್ಣ ಆಸ್ತಿಯಾಗಿದ್ದು, ಆ ಯಜಮಾನ ತನ್ನ ಗುಲಾಮನ ಶ್ರಮ ಮತ್ತು ಶಕ್ತಿಯ ಪೂರ್ಣ ನಿಯಂತ್ರಕನಾಗಿರುತ್ತಾನೆ. ಆದರೆ, ಭಾರತದಲ್ಲಿ ಗುಲಾಮಗಿರಿ ನೀತಿ, ರೀವಾಜುಗಳು ಪ್ರೆಸಿಡೆನ್ಸಿಯಿಂದ ಪ್ರೆಸಿಡೆನ್ಸಿಗೆ ಮತ್ತು ಜಿಲ್ಲೆಗಳಂದ ಜಿಲ್ಲೆಗೆ, ಬೇರೆ ಬೇರೆಯಾಗಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ, ಇದು ಆಯಾಯ ಸ್ಥಳೀಯ ಪದ್ಧತಿಗಳು ಮತ್ತು ಸಂಪ್ರದಾಯಗಳಗನುಗುಣವಾಗಿ ಹಾಗೂ ಯಜಮಾನರ ಅವಲಂಬಿಕೆಯನ್ನು ಅನುಸರಿಸಿ

ಅಭಿವೃದ್ಧಿಗೊಂಡಿದೆ. ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಗುಲಮಗಿರಿ ಪರಿಕಲ್ಪನೆಯನ್ನು ಆಧರಿಸಿ, ಜೀತದಾಳು ಮತ್ತು ಸ್ವತಂತ್ರ ಕೃಷಿ ಕೂಲಿ ಕಾರ್ಮಿಕನ ನಡುವಿನ ವ್ಯತ್ಯಾಸವನ್ನು ವ್ಯಾಖ್ಯಾನಿಸಲು ಸಾಧ್ಯವಾಗದು. ಅವರೆಲ್ಲರೂ ಸಮಾಜದ ಕೆಳವರ್ಗಕ್ಕೆ ಸೇರಿದವರಾಗಿದ್ದಾರೆ.

ತುಳುನಾಡಿನಲ್ಲಿ ಅಸ್ಪೃಶ್ಯರು ಒಂದಲ್ಲ ಒಂದು ರೀತಿಯ ಬಂಧನಕ್ಕೊಳಗಾಗಿರುವುದು ಕಂಡು ಬರುತ್ತದೆ. ಇಲ್ಲಿ ಸಾಮಾನ್ಯವಾಗಿ ಕೆಳವರ್ಗದವರನ್ನು ಗುಲಾಮರನ್ನಾಗಿಯೆ ನೋಡಲಾಗುತ್ತಿತ್ತು, ಆದರೆ ವಿಶೇಷವೆಂದರೆ ಎಲ್ಲಾ ಜಾತಿಯಲ್ಲಿ ಗುಲಮರಿರುವುದು ಕಂಡು ಬರುತ್ತದೆ. ಮುಖ್ಯವಾಗಿ ಮನೆಗೆಲಸ ಮಾಡಲು ಬಳಸಿಕೊಳ್ಳುವ ಸೇವಕರು.

ಗುಲಾಮಗಿರಿಯ ಒಂದು ಸಾಮಾನ್ಯ ಲಕ್ಷಣವೇನೆಂದರೆ, ಅದೊಂದು ಅನುವಂಶೀಯವಾಗಿ ಬಂದಿರುವ ಪದ್ಧತಿಯಾಗಿದ್ದು, ಒಂದು ಸಾರಿ ಈ ಆಚರಣೆ ಬಲಿಯಾದರೆ, ಅಂತವರು ಜೀವನ ಪೂರ್ತಿ ಬಲಿಯಾಗುತ್ತಾರೆ ವಿನಃ ಯಾವ ಪ್ರಯತ್ನದಿಂದಲೂ ತಪ್ಪಿಸಿಕೊಳ್ಳಲು ಅಸಾಧ್ಯ.

ತುಳುನಾಡಿನಲ್ಲಿ ಗುಲಾಮರನ್ನು ಅಸ್ಪೃಶ್ಯರೆಂದು, ಉಳಿದ ಮೇಲ್ವರ್ಗದ ವರ್ಗಗಳು ಪರಿಗಣಿಸುತ್ತಿದ್ದವು. ಎಷ್ಟು ನಿಕೃಷ್ಟ ಬದುಕು ಇವರದ್ದಾಗಿತೆಂದರೆ, ಸಮಾಜದ ಮುಖ್ಯವಾಹಿನಿಯಿಂದ ಮಾರುದೂರದಲ್ಲಿ ತಮ್ಮ ಗುಡಿಸಲುಗಳನ್ನು ಕಟ್ಟಿಕೊಳ್ಳಬೇಕಾಗಿತ್ತು. ಅಲ್ಲದೆ, ಇನ್ನಿತರ ಮೇಲ್ಜಾತಿಗಳ ವಾಸ್ತವ್ಯ ನೆಲೆಗಳ ಸಮೀಪದಲ್ಲಿ ತಮ್ಮ ಮನೆಗಳನ್ನು ಕಟ್ಟುವ ಹಾಗಿರಲಿಲ್ಲ. ಗುಲಾಮ ಜಾತಿಯಾಳುಗಳಲ್ಲಿ ಚಲನ ವಲನಗಳನ್ನು ನಿಯಂತ್ರಿಸಲು ನಿರ್ದಿಷ್ಟ ನೀತಿಗಳನ್ನು ಅವರ ಮೇಲೆ ಹೇರಿ ಪಾಲಿಸಲು ಆದೇಶಿಸಲಾಗಿತ್ತು.

ಆಂಗ್ಲ ದಾಖಲೆಗಳಲ್ಲಿ ಗುಲಾಮರ ಹಾಗೂ ಅಸ್ಪಶ್ಯತೆಯ ಬಗ್ಗೆ ನಿಖರ ಮಾಹಿತಿಗಳೂ ದೊರೆತಿಲ್ಲ. ಇದಕ್ಕೆ ಕಾರಣವನ್ನೂ ಗುರುತಿಸಿಬಹುದು. ನಿರ್ದಿಷ್ಟ ವಿಶಾಲ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದುದರಿಂದ, ಜಿಲ್ಲಾ ಆಡಳಿತಗಾರರಿಗೆ ಸ್ಥಳೀಯ ಜನರ ಸಂಪ್ರದಾಯ, ಆಚರಣೆಗಳು, ಮತ್ತು ಶಿಷ್ಟಾಚಾರದ ವರ್ತನೆಗಳನ್ನು ತಿಳಿಯಲು ಸಮಯದ ಅಭಾವವೂ ಇತ್ತೆಂಬುದು ಸ್ಪಷ್ಟ. ಒಂದು

ವೇಳೆ ಅವರು ತೀರಾ ಉತ್ಸುಕರಾಗಿದ್ದಲ್ಲ, ಒಂದೇ ಭೌಗೋಳಿಕ ಪ್ರದೇಶದಲ್ಲಿ ಸಂಪೂರ್ಣ ಮಾಹಿತಿ ತಿಳಿಯುವವರೆಗೆ ದೀರ್ಘಕಾಲದವರೆಗೆ ಉಳಿಯಬೇಕಿತ್ತು. ಆಡಳಿತ ಸೇವೆಯಲ್ಲಿ ಅಂತಹ ಅವಕಾಶಗಳೂ ವಿರಳ.

ಸ್ಥಳೀಯರಿಂದ ಕಲೆ ಹಾಕಿದ ಮಾಹಿತಿಗಳೂ ಕೂಡಾ ಮೇಲ್ವರ್ಗ ಹಾಗೂ ಪ್ರತಿಷ್ಠಿತ ವರ್ಗಗಳಿಂದಲೇ ಪಡೆಯುತ್ತಿದ್ದರು. ಇವರು ಗುಲಾಮಗಿರಿಯನ್ನು ಸಾಧ್ಯವಾದಷ್ಟು ಮೃದುವಾಗಿ ಬಿಂಬಿಸುವಲ್ಲಿ ಆಸಕ್ತಿಯನ್ನು ಹೊಂದಿದ್ದರು. ಸ್ವಾಭಾವಿಕವಾಗಿ ಸ್ಥಳೀಯ ಅಧಿಕಾರಿಗಳ ಮಾಹಿತಿಗಳು ಯಜಮಾನನ ಪರವಾಗಿಯೇ ಇತ್ತೆನ್ನುವುದೂ ಸಹಜ. ಅಷ್ಟೇ ಅಲ್ಲದೆ, ಗುಲಾಮಗಿರಿ ಖಾಸಗಿ ಅಂಶವಾಗಿದ್ದರಿಂದ, ಸರಕಾರದ ಹಸ್ತಕ್ಷೇಪಕ್ಕೆ ಯಾವುದೇ ಅವಕಾಶವು ಇರಲಿಲ್ಲ ಆದಾಗ್ಯೂ ತುಳುನಾಡಿನಲ್ಲಿ 19ನೇ ಶತಮಾನಾದ ಅವಧಿಯಲ್ಲಿ ಸೇವೆಯಲ್ಲಿದ್ದ, ಜಿಲ್ಲಾಧಿಕಾರಿಗಳ ವರದಿಗಳಿಂದ ಗುಲಾಮತನದ ಬೇರೆ ಬೇರೆ ಸ್ವರೂಪಗಳನ್ನು, ಅವರ ಸ್ಥಿತಿಗತಿಗಳಿಗೆ ಸಂಬಂಧಿಸಿದ ಸಮಸ್ಯೆಗಳ ಕುರಿತು ವಿಫಲ ಮಾಹಿತಿಗಳನ್ನು ಪಡೆಯಬಹುದಾಗಿದೆ. ಕೆಲವೊಮ್ಮೆ ಪ್ರವಾಸಿಗರ ವರದಿಯು ಕೂಡ, ಮುಖ್ಯ ಆಧಾರವಾಗಿ ಲಭಿಸುತ್ತವೆ.

ತುಳುನಾಡಿನುದ್ದಕ್ಕೂ ಅಸ್ತಿತ್ವದಲ್ಲಿದ್ದ ಗುಲಾಮಗಿರಿಯ ಉಗಮದ ಬಗ್ಗೆ ನಿಖರವಾಗಿ ಪರಾಮರ್ಶಿಸಲು ಸಾಧ್ಯವಾಗದೇ ಹೋದರೂ ಅದರ ಉಗಮಕ್ಕೆ ಕಾರಣವನ್ನಂತೂ ನೀಡಲು ಸಾಧ್ಯವಿದೆ. ಒಂದು ಆಕ್ರಮಣ ತಾನು ಆಕ್ರಮಿಸಿಕೊಂಡ ಪ್ರದೇಶದ ಜನರನ್ನು ಜೀತದಾಳುಗಳನ್ನಾಗಿ ಪರಿವರ್ತಿಸುವುದು ಸಾಮಾನ್ಯವಾದ ಅಂಶವಾಗಿದೆ.

ದಾಖಲೆಗಳ ಪ್ರಕಾರ ಟಿಪ್ಪು ಸುಲ್ತಾನ್ ಕೊಡಗು ಭೂಭಾಗಕ್ಕೆ ದಾಳಿ ಮಾಡಿದಾಗ, ಹಲವಾರು ಜನರನ್ನು ಸೆರೆ ಹಿಡಿದು, ತನ್ನ ಮೈಸೂರಿನ ಮುಖಜ ಭೂಮಿಯಲ್ಲಿ ಕೃಷಿ ಕಾರ್ಮಿಕರನ್ನಾಗಿ ಪರಿವರ್ತಿಸಿ, ಜಮೀನ್ದಾರರ ವಶಕ್ಕೆ ನೀಡಿದ್ದನ್ನು. ಕಾಲಕ್ರಮೇಣ ಈ ಜನರ ವಂಶದವರು ಗುಲಾಮರಾಗಿ ಉಳಿಯುತ್ತಿದ್ದರು. ಇನ್ನೊಂದು ಮುಖ್ಯಕಾರಣ, ಕೃಷಿ ಕಾಮಿಕರು ತಮ್ಮ ಭದ್ರತೆ

ಮತ್ತು ಸುರಕ್ಷತೆಯ ದೃಷ್ಟಿಯಿಂದ, ಪ್ರಬಲ ಜಮೀನ್ದಾರನ ಕೆಲಸದಾಳುಗಳಾಗಿ ಸೇರಿಕೊಳ್ಳುತ್ತಿದ್ದರು. ಈ ಒಪ್ಪಂದದಲ್ಲಿ ಗುಲಾಮ ಮತ್ತು ಆತನ ಕುಟುಂಬ ಎಲ್ಲಾ ಸಂದರ್ಭದಲ್ಲೂ, ಎಲ್ಲಾ ಪರಿಸ್ಥಿತಿಯಲ್ಲೂ ಬದುಕು ನಡೆಸುವ ಭರವಸೆ ಇತ್ತು. ಇಂತಹ ಒಪ್ಪಂದಗಳು, ಮೊದಲಿಗೆ ಯಜಮಾನ ಮತ್ತು ಗುಲಾಮನೊಂದಿಗೆ ವೈಯುಕ್ತಿಕ ನೆಲೆಯಲ್ಲಿ ನಡೆಯುವಂತಹದ್ದು ಆದರೆ, ಈ ಒಪ್ಪಂದದ ಶರತ್ತುಗಳು ಅವನ ನಂತರದ ತಲೆಮಾರಿನವರೆಗೂ ಅನ್ವಯಿಸಿ, ಅವರೂ ಕೂಡ ಯಜಮಾನಿಕೆಗೆ ಖಾಯಂ ಜೀತರಾಗಿರಬೇಕು. ಇನ್ನೊಂದು ನೆಲೆಯಲ್ಲಿ ಕೃಷಿ ಕಾರ್ಮಿಕರಲ್ಲಿ ವಿಶೇಷವಾಗಿ ಇರುವ ಮೂಢನಂಬಿಕೆ, ಬಡತನ ಮತ್ತು ಅವರಲ್ಲಿರುವ ಮೌಢ್ಯವೂ ಕೂಡ, ಆಥಿಕ ಶೋಷಣೆಗೆ ಅವಕಾಶ ನೀಡಿ, ಕೊನೆಗೆ ಅವರು ಗುಲಾಮಗಿರಿಗೆ ಶರಣಾಗುತ್ತಿದ್ದರು. ಈ ರೀತಿಯ ಒಪ್ಪಂದವನ್ನು ಅವಲಂಬನೆಯ ಬಂಧನವೆಂದು ಭಾವಿಸಲಾಗಿತ್ತು ಮತ್ತು ಅಂತಿಮವಾಗಿ ಕೃಷಿ ಕಾರ್ಮಿಕರು ಗುಲಾಮತನದಲ್ಲಿ ಪರ್ಯಾವಸಾನಗೊಳ್ಳುತ್ತಿದ್ದರು. ಬಹುಶಃ ಈ ಅಂಶ ಕೂಡ ಗುಲಾಮಗಿರಿಯ ಉಗಮಕ್ಕೆ ಕಾರಣ.[6]

ಭೂ ಮಾಲೀಕರು ಸಣ್ಣ ಹಿಡುವಳಿಗಾರರಿಗೆ, ಕಾರ್ಮಿಕರಿಗೆ ಮುಂಗಡವಾಗಿ ಹಣದ ನೆರವು ನೀಡುತ್ತಿದ್ದರು. ನೆರವು ಅಥವಾ ಸಾಲ ಪಡೆದ ಸಣ್ಣ ರೈತ, ಕೂಲಿ ಕಾರ್ಮಿಕ ಸಾಲ ಮರುಪಾವತಿಯವರೆಗೆ, ಸಾಲ ನೀಡಿದ ಜಮೀನ್ದಾರನಿಗೆ ಅಡಿಯಾಳಾಗಿರುವ ನಿಯಮಕ್ಕೆ ಒಳಗಾಗುತ್ತಿದ್ದ. ವಿಪರ್ಯಾಸವೆಂದರೆ, ಸಾಲದ ಹೊರೆ ವೃದ್ಧಿಸುತ್ತಲೇ ಇತ್ತು. ಹಾಗೂ ಒಮ್ಮೆ ಗುಲಾಮ ಸಾಲಗಾರನಾಗಿಯೇ ಸತ್ತರೆ, ಆ ಹೊರೆ ವಿಧವೆ ಹೆಂಡತಿಗೂ, ಮಕ್ಕಳಿಗೂ ಹಸ್ತಾಂತರಿಸಲ್ಪಡುತ್ತಿದ್ದರು. ಜಮೀನ್ದಾರನ ಒತ್ತಾಯದಿಂದ ಅಲಿಖಿತ ಒಪ್ಪಂದಕ್ಕೂ ಒಳಗಾಗಿ ಕೊನೆಯವರೆಗೂ, ಅವರು ಗುಲಾಮಗಿರಿಯಲ್ಲಿ ಬಂಧಿಸಲ್ಪಡುತ್ತಿದ್ದರು. ಈ ರೀತಿ ಗುಲಾಮಗಿರಿ ಅಘೋಷಿತವಾಗಿ ಸ್ಥಳೀಯ ಬೇಡಿಕೆಗನುಗುಣವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತೆನ್ನಬಹುದು.

ಹುಟ್ಟಿನಿಂದ, ಸೆರೆ ಹಿಡಿಯುವುದರಿಂದ, ಖರೀದಿಸುವುದರಿಂದ, ದಾನದ ರೂಪದಿಂದ, ಜೂಜಾಟದಿಂದ, ಅನುವಂಶೀಯವಾಗಿ, ಸ್ವಚ್ಛೆಯಿಂದ ಶರಣಾಗುವುದರಿಂದ, ವೈಯುಕ್ತಿಕವಾಗಿ

ತನ್ನನ್ನು ತಾನು ಮಾರಿಕೊಳ್ಳುವುದರಿಂದ, ಬರಗಾಲ ಎದುರಾದಾಗ, ಅಥವಾ ಧಾರ್ಮಿಕ ಆದೇಶಗಳಿಂದ ಒಬ್ಬ ವ್ಯಕ್ತಿ ಗುಲಾಮಗಿರಿಗೆ ಒಳಗಾಗುತ್ತಾನೆ. ತಾತ್ಕಾಲಿಕ 'ಗುಲಾಮಗಿರಿ' ಸಾಮಾನ್ಯವಾಗಿ, ಸಾಲದ ಉದ್ದೇಶದಿಂದ ಸೇವಕನಾಗಿರುತ್ತಿದ್ದನು. ಈ ವ್ಯವಸ್ಥೆಯಲ್ಲಿ ಗುಲಾಮನು ತನ್ನ ಗುಲಾಮತನವನ್ನು ಸಾಲ ತೀರಿಸುತ್ತಿದ್ದಂತೆ ಮುಕ್ತಿಗೊಳಿಸಬಹುದಿತ್ತು. ಕೆಲವೊಮ್ಮೆ, ನಿರ್ದಿಷ್ಟ ಅವಧಿಯವರೆಗೆ ಗುಲಾಮನಾಗಿದ್ದು, ತನ್ನ ಜೀವನ ನಡೆಸಲು ಕೂಡ ಒಬ್ಬ ಗುಲಾಮ ಪದ್ಧತಿಗೆ ಶರಣಾಗುತ್ತಾನೆ. ಗುಲಾಮನು ತನ್ನ ಒಡೆಯನ ಸಂಪೂರ್ಣ ಆಸ್ತಿಯಾಗಿ ಅವನ ಮೇಲೆ ತನ್ನ ಅಧಿಕಾರವನ್ನು ಬಳಸಿಕೊಂಡು, ಯಜಮಾನ ಗುಲಾಮನನ್ನು ನಿರ್ದಾಕ್ಷಿಣ್ಯವಾಗಿ ಯಾವುದೇ ಶಿಕ್ಷೆ ನೀಡದೆ ಕೊಲ್ಲಬಹುದು, ಇಲ್ಲವೆ ಸುಟ್ಟು ಹಾಕಬಹುದಿತ್ತು.

ಕಾನೂನಿನಲ್ಲಿ ಗುಲಾಮನ ರಕ್ಷಣೆಗೆ ಯಾವುದೇ ಅವಕಾಶವಿರಲಿಲ್ಲ. ಯಜಮಾನನ ವಿರುದ್ಧ, ಆತನ ಕ್ರೂರತೆ, ಕೆಟ್ಟ ನಡವಳಿಕೆಯ ವಿರುದ್ಧ ಧ್ವನಿ ಎತ್ತುವ ಹಕ್ಕು ಗುಲಾಮನಿಗಿರಲಿಲ್ಲ, ಅದು ಹೆಂಗಸಾಗಲಿ, ಗಂಡಸಾಗಲಿ ಒಂದೊಮ್ಮೆ ತನ್ನ ಯಜಮಾನನ ಪ್ರಾಣವನ್ನು, ಸಂಭಾವ್ಯ ದುರಂತದಿಂದ ಪಾರುಮಾಡಿದ್ದಲ್ಲಿ, ಅವನು ದಾಸ್ಯದಿಂದ ಮುಕ್ತನಾಗುತ್ತಿದ್ದನು. ಯಜಮಾನ ನೀಡದ ಹೊರತಾಗಿ ಗುಲಾಮನಿಗೆ ಆಸ್ತಿಯಲ್ಲಿ ಯಾವುದೇ ಹಕ್ಕು ಇರಲಿಲ್ಲ. ಹೆಣ್ಣು ಒಬ್ಬಳು ಗುಲಾಮಗಿರಿಗೆ ಒಳಗಾಗಿದ್ದಲ್ಲಿ, ಅವಳ ಯಜಮಾನನಿಗೆ ಗಂಡು ಮಗು ಇಲ್ಲದಾಗ, ಆತನಿಗೆ ಗಂಡು ಮಗುವನ್ನು ಹೆತ್ತುಕೊಟ್ಟಲ್ಲಿ, ಅವಳು ದಾಸ್ಯದಿಂದ ಮುಕ್ತಿ ಪಡೆಯುವ ಬೇಡಿಕೆ ಸಲ್ಲಿಸಬಹುದಾಗಿತ್ತು. ಇದು ಕಾನೂನಿನ ಚೌಕಟ್ಟಿನಲ್ಲಿ ಸಾಧ್ಯವಾಗುತ್ತಿತ್ತು.

ತುಳುನಾಡಿನ ಕೃಷಿ ಕಾರ್ಮಿಕರ ಜೀತಗಾರಿಕೆಯ ಕುರಿತು, ಹತ್ತೊಂಬತ್ತನೆಯ ಶತಮಾನಕ್ಕೆ ಮೊದಲು ಸರಕಾರಿ ದಾಖಲೆಗಳಲ್ಲಿ ಇರುವ ಮಾಹಿತಿಗಳು ತುಂಬಾ ವಿರಳ. ಅವರ ಸಮಸ್ಯೆಗಳ ಕುರಿತು. ಬೆಳಕು ಚೆಲ್ಲುವ ದಾಖಲೆಗಳು ತೀರಾ ವಿರಳ. ಆದರೆ, ಕ್ರಿ.ಶ. 1800ರಲ್ಲಿ ಭಾರತದ ಗವರ್ನರ್ ಜನರಲ್ ಲಾರ್ಡ್ ವೆಲ್ಲಸ್ಲಿ, ಬಂಗಾಳ ಪ್ರಾಂತದಲ್ಲಿ ಸರ್ಜನ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ. ಫ್ರಾನ್ಸಿಸ್ ಬುಕನನ್‌ನನ್ನು ದಕ್ಷಿಣ ಭಾರತದ ಪ್ರಾಂತಗಳಾದ ಮೈಸೂರು, ಮಲಬಾರ್ ಮತ್ತು ಕೆನರಾ

ಪ್ರದೇಶಗಳಲ್ಲಿ ಪ್ರವಾಸ ಕೈಗೊಳ್ಳಲು ನಿಯೋಜಿಸುತ್ತಾನೆ. ಮುಖ್ಯವಾಗಿ, ಈ ಪ್ರದೇಶಗಳ ಆಸಕ್ತಿದಾಯಕ ಇತಿಹಾಸ, ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಕುರಿತು ವಿಸ್ತೃತವಾದ ವರದಿ ರಚಿಸಲು ಆದೇಶಿಸುತ್ತಾನೆ. ಈ ಹಿನ್ನಲೆಯಿಂದ ರಚಿಸಲ್ಪಟ್ಟ ಬುಕನನ್‌ನ ವರದಿ ಅಷ್ಟೇ ಅಮೂಲ್ಯವೂ ಹಾಗೂ ಆಸಕ್ತಿದಾಯಕವೂ ಆಗಿದೆ. ಇದರಲ್ಲಿ ಈ ಭಾಗದ ಕುರಿತು ಉಪಯುಕ್ತ ಮಾಹಿತಿಗಳು ಅಡಕವಾಗಿವೆ.

ತುಳುನಾಡು ಅಥವಾ ಕರಾವಳ ತೀರ ಪ್ರದೇಶದಲ್ಲಿ, ಭಿನ್ನ ಭಿನ್ನ ರೀತಿಯ ದಾಸ್ಯಕ್ಕೆ ಒಳಗಾದ ಗುಂಪು ಇತ್ತು, 'ಹೊಲೆಯ' ಅಥವಾ 'ದರ್ಸ್' ಎಂದು ಕರೆಸಲ್ಪಡುವ ವರ್ಗ, ವಿವಿಧ ಹಂತಗಳಲ್ಲಿ ದಾಸ್ಯಕ್ಕೆ ಒಳಗಾಗುತ್ತಿತ್ತು. ಈ ವರ್ಗ ತನ್ನ ಒಡೆಯನ ಕೃಷಿ ಭೂಮಿಗಳಲ್ಲಿ, ಉಳುಮೆ ಮುಂತಾದ ಕೃಷಿ ಚಟುವಟಿಕೆಯಲ್ಲಿ ತೊಡಗುತ್ತಿದ್ದು, ಪ್ರತಿಫಲವಾಗಿ ಅತೀ ಕಡಿಮೆ ವೇತನವನ್ನು ಪಡೆಯುತ್ತಿದ್ದರು. ಅಧಿಕೃತ ವರದಿಗಳಲ್ಲಿ, ಈ ರೀತಿಯ ಗುಲಮಗಿರಿ ತುಳುನಾಡಿನಲ್ಲಿ ಚಾಲ್ತಿಯಲ್ಲಿದ್ದುದನ್ನು ಉಲ್ಲೇಖಿಸಿತ್ತವೆ. ಬುಕಾನನ್ ತಾನು ಭೇಟಿ ಕೊಟ್ಟ ಸ್ಥಳಗಳಲೆಲ್ಲಾ, ಕೃಷಿ ಕಾರ್ಮಿಕರ ಸ್ಥಿತಿಗತಿಗಳನ್ನು ಕೂಲಂಕುಶವಾಗಿ ತಿಳದುಕೊಳ್ಳುತ್ತಿದ್ದ. ಹೊಲ ಗದ್ದೆಗಳಲ್ಲಿ ದುಡಿಯುತ್ತಿದ್ದ ಕೃಷಿ ಕಾರ್ಮಿಕರ ವೇತನಗಳ ಕುರಿತು ಕೂಡ ಉಲ್ಲೇಖಿಸಿದ್ದಾನೆ. ಅವನ ಅನುಭವದಂತೆ, ದುಡಿಯುವ ವರ್ಗ ಕೆಲವು ಸಂದರ್ಭಗಳಲ್ಲಿ ತಮ್ಮ ವೇತನವನ್ನು ಹಣದ ರೂಪದಲ್ಲಿಯೋ ಅಥವಾ ಕೆಲವು ಸಲ ವಸ್ತುವಿನ ರೂಪದಲ್ಲಿಯೋ ಪಡೆಯುತ್ತಿದ್ದರು. ಹಾಗಾಗಿ, ನಿಖರವಾಗಿ ಇಂತಿಷ್ಟೇ ವೇತನವನ್ನು ಪಡೆಯುತ್ತಿದ್ದರು. ಎಂಬುದನ್ನು ತಿಳಯಲು ಸಾಧ್ಯವಾಗದು.

ಬುಕನನ್ ಹೆಚ್ಚಾಗಿ ಕರಾವಳ ಜಿಲ್ಲೆಯ ಅಧಿಕಾರಿಗಳ ವರದಿಯನ್ನು ಅವಲಂಭಿಸಿದ್ದನು. ಹಾಗೂ ಈ ಅಧಿಕಾರಿಗಳು ಭಾರತಕ್ಕೆ ಬಂದ ಮೊದಲ ಹಂತದ ಸೇವಕರಾಗಿದ್ದರಿಂದ ವಿವೇಚನಾಯುಕ್ತ ಮಾಹಿತಿಯನ್ನು ನೀಡಿರುವುದನ್ನು ನಂಬಬಹುದಾಗಿದೆ. ಬುಕನನ್‌ನ ವರದಿಯನ್ನು ಆಧರಿಸಿ ತುಳುನಾಡಿನಲ್ಲಿ ಗುಲಾಮಗಿರಿ, ಎಲ್ಲಾ ಪ್ರದೇಶಗಳಲ್ಲೂ ಹರಡಿತು ಎಂದು ಹೇಳ ಬಹುದು. ಇಲ್ಲಿ ಗುಲಾಮರು ಯಜಮನನ ಖಾಸಗಿ ಆಸ್ತಿಯಾಗಿರುತ್ತಿದ್ದರು. ಇವರ ಸ್ಥಿತಿ ಚಿಂತಾಜನಕವಾಗಿತ್ತು

ಮತ್ತು ಅವರ ಸ್ಥಿತಿಗಳನ್ನು ಆ ಕಾಲದ ಸ್ವತಂತ್ರ ಕೆಲಸದಾಳುಗಳಿಗೆ ಹೋಲಿಸಲು ಅಸಾಧ್ಯ ಇಲ್ಲಿ ಹಂಚಿ ಹೋಗಿರುವ ಗುಲಾಮತನದ ದಟ್ಟನೆಯ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗದೇ ಹೋದರೂ, ಭಿನ್ನ ರೀತಿಯ ಮಾಹಿತಿಗಳು ವರದಿಗಳಿಂದ ದೊರೆಯುತ್ತವೆ.

ಒಂದು ಸಂದರ್ಭದಲ್ಲಿ ಬುಕನನ್ ತುಳುನಾಡಿನಲ್ಲಿ ಸುಮಾರು 60,000ದಷ್ಟು ಗುಲಾಮರಿದ್ದರು ಎಂದು ವರದಿ ಮಾಡುತ್ತಾರೆ. 1801 ರಲ್ಲಿ ಕರಾವಳಿ ಪ್ರದೇಶದ ದಕ್ಷಿಣ ಭಾಗದ ಕಂದಾಯ ಅಧಿಕಾರಿಯಾಗಿದ್ದ ಜೆ.ಜಿ.ರೆವೆನ್ ಶಾಹ ತುಳುನಾಡಿನ ಒಟ್ಟು ಜನಸಂಖ್ಯೆಯಾದ 396,672ರಲ್ಲಿ ಸುಮಾರು 52,022ರಷ್ಟು ಜನರು ಗುಲಾಮರಾಗಿದ್ದರು ಎಂದು ತನ್ನ ವರದಿಯಲ್ಲಿ ದಾಖಲಿಸಿದ್ದಾರೆ. ಇದರಲ್ಲಿ ಸುಮಾರು 722ರಷ್ಟು ಮಹಿಳೆಯರು ಮತ್ತು ಮಕ್ಕಳು ಹಾಗೂ ಅರಬ್ ಪ್ರಾಂತ್ಯದಿಂದ ಅಮದು ಮಾಡಿಕೊಂಡಿರುವ ಗುಲಾಮರನ್ನು ತನ್ನ ವರದಿಯಲ್ಲಿ ಸೇರಿಸಿದ್ದಾರೆ 1918ರಲ್ಲಿ ಥೋಮಸ್ ಹ್ಯಾರಿಸ್ ಎಂಬ ಅಧಿಕಾರಿ, ತುಳುನಾಡಿನಲ್ಲಿ ಸುಮಾರು 82000ದಷ್ಟು, ಗುಲಾಮರಿದ್ದರು. ಎಂದು ವರದಿ ಮಾಡುತ್ತಾನೆ. ಇದರಲ್ಲಿ ಸುಮಾರು 60 ಸಾವಿರ ಗುಲಾಮರು ಕೃಷಿ ಕಾರ್ಮಿಕರಾಗಿದ್ದರು. 1826ರಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟ್‌ಗಳ ಅಂದಾಜಿನ ಪ್ರಕಾರ 60,000 ವಂಶಪಾರಂಪರ್ಯ ಗುಲಾಮರಾಗಿದ್ದರು ಎಂದು ವರದಿ ಮಾಡುತ್ತ, ಅವರಲ್ಲಿ ಸುಮಾರು 4500 ಮಂದಿ ಗುಲಾಮರು, ತಮ್ಮನ್ನು ತಾವೇ ಯಜಮಾನನಿಗೆ ಮಾರಿಕೊಂಡವರು. ಉಳಿದ 22,000 ಗುಲಾಮರು ಯುದ್ಧದಲ್ಲಿ ಸೆರೆಯಾಳಾಗಿ ಸಿಕ್ಕಿದವರು ಹಾಗೂ ಜಾತಿ ಭ್ರಷ್ಟ ಬ್ರಾಹ್ಮಣ ಮಹಿಳೆಯರು ಸೇರಿದ್ದರು. ಆದಾಗ್ಯೂ, ಈ ಅಂಕಿ ಸಂಖ್ಯೆಯನ್ನು ನಿಖರವಾಗಿ ಹೇಳಲು, ಯಾವುದೇ ಜನಗಣತಿ ವರದಿಗಳು, ಹತ್ತೊಂಬತ್ತನೆ ಶತಮಾನದ ಮೊದಲ ಎರಡು ದಶಕಗಳಲ್ಲಿ ನಡೆದಿರಲ್ಲಿಲ್ಲ. 1801 ರಿಂದ 1827ರ ನಡುವೆ ಜನಸಂಖ್ಯೆಯ ಹೆಚ್ಚಳದ ಶೇಕರಾವಾರು ಅಂಶವನ್ನು ಗಮನಿಸಿ ಅಂದಾಜು ಮಾಡಿ, 1819ರಲ್ಲಿ ಗುಲಾಮರ ಸಂಖ್ಯೆ ಸುಮಾರಿಗೆ ಒಟ್ಟು ಜನಸಂಖ್ಯೆಯ ಹತ್ತು ಶೇಕಡವಿತ್ತೆಂದು ಟಿ. ಹ್ಯಾರಿಸ್ ಉಲ್ಲೇಖಿಸುತ್ತಾನೆ. ಹಾಗೆನೆ, 1851 ರಲ್ಲಿ ನಡೆದ ಜನಗಣತಿಯಂತೆ, ತುಳುನಾಡಿನಲ್ಲಿ ಒಟ್ಟು ಗುಲಾಮರ ಜನಸಂಖ್ಯೆ ಸರಿ ಸುಮಾರು 1,56,333 ರಷ್ಟಿರುತ್ತೇಂದು ಪರಿಗಣಿಸಲಾಗಿದೆ.[7]

ಕೆನರಾಕ್ಕೆ ಕಂದಾಯ ಅಧಿಕಾರಿಗಳಾಗಿ ನೇಮಕವಾದವರ ದೃಷ್ಟಿಕೋನದಂತೆ, 1801ರ ಹೊತ್ತಿಗೆ ತುಳುನಾಡಿನಲ್ಲಿ ಗುಲಾಮರು, ಇಡೀ ಕೃಷಿ ಭೂಮಿಯನ್ನು ಉಳುಮೆ ಮಾಡುವ ವರ್ಗವಾಗಿ ಪರಿವರ್ತನೆಗೊಂಡಿತು. ಅಲ್ಲದೆ, ಜಮೀನುಗಳು, ಗುಲಾಮರಿಲ್ಲದಿದ್ದರೆ, ಮೌಲ್ಯವನ್ನು ಕಳೆದುಕೊಳ್ಳುತ್ತಿತ್ತೆಂಬ ಅಭಿಪ್ರಾಯವು ಇತ್ತು. ಇದು ಮುಖ್ಯವಾಗುತ್ತದೆ. ಏಕೆಂದರೆ, ಆ ಕಾಲದಲ್ಲಿ ಕೂಲಿ ಆಳುಗಳು ಅಭಾವವು ಒಂದು ಸಮಸ್ಯೆಯಾಗಿ ಇತ್ತು. ಸಂಪ್ರದಾಯದಂತೆ, ಮಾಲೀಕ ತನ್ನ ಗುಲಾಮರಿಗೆ ಪ್ರತಿ ವರ್ಷಕ್ಕೆ ಎರಡು ಜೊತೆ ಬಟ್ಟೆ ಮತ್ತು ಖರ್ಚಿಗೆ ಬೇಕಾಗುವ ಆಹಾರೋತ್ಪನ್ನಗಳನ್ನು ನೀಡುತ್ತಿದ್ದನು. ಬೆಳೆ ಕಟಾವಿನ ಸಮಯದಲ್ಲಿ ಗುಲಾಮನು ದಿನಗೂಲಿ ಪಡೆಯಲು ಅರ್ಹನಲ್ಲ. ಆದರೆ ಗುಲಾಮನು ಕಟಾವು ಮಾಡಿದ ಭತ್ತವನ್ನು ಕುಟ್ಟಿದ ನಂತರ ಸಿಗುವ ಅಕ್ಕಿಯ ಹನ್ನೊಂದನೆಯ ಭಾಗವನ್ನು ಪಡೆಯುತ್ತಿದ್ದನು.

ಒಂದು ವರ್ಗದ ಗುಲಾಮರು ಕೆಲವು ನಿರ್ದಿಷ್ಟ ಶರತ್ತುಗಳ ಮೇಲೆ, ಅಂದರೆ ಮಾಲೀಕನು ಮಾರಾಟ ಮಾಡದೆ ನಿಯಮದ ಮೇಲೆ ಸೇವೆಗೆ ಸೇರಿಕೊಳ್ಳುತ್ತಿದ್ದರು. ಗುಲಾಮರಲ್ಲಿ ಅವ್ಯಾಹತವಾಗಿದ್ದ ಒಂದು ಹೆದರಿಕೆಯೆಂದರೆ, ಅವರ ಮಾಲೀಕನು ತಮ್ಮ ತಂದೆ ತಾಯಿಗಳಿಂದ ಮಕ್ಕಳನ್ನು, ಗಂಡ ಹೆಂಡಿರನ್ನು ಬೇರ್ಪಡಿಸುವ ಹಾಗೂ ಮಾರಾಟ ಮಾಡುವ ಪದ್ಧತಿ, ಮಾಲೀಕರಲ್ಲಿಯೂ ತಮ್ಮ ಗುಲಾಮರ ಬಗ್ಗೆ ಇದೇ ರೀತಿಯ ಭಯವಿತ್ತು. ಕುಟುಂಬದಿಂದ ಬೇರ್ಪಟ್ಟ ಗುಲಾಮ ಹೊಸ ಮಾಲೀಕನ ಹಿಡಿತದಿಂದ ಪಾರಾಗಲಿಕ್ಕೆ ಪ್ರಯತ್ನಿಸಬಹುದೆಂದು, ಬುಕನನ್ ತುಳುನಾಡಿನ ಜನ ಜೀವನ ಚಿತ್ರಣವನ್ನು ನೀಡುತ್ತಾನೆ.

ಕುದ್ಮುಲ್ ರಂಗರಾಯರ ಕಾಲದ ಸಮಾಜವು ಅಸ್ಪಶ್ಯತೆಯು ಮಹಾ ಪಾಪವು ಎಂಬ ನಿಟ್ಟಿನಲ್ಲಿ ತಮ್ಮ ಧಾರ್ಮಿಕ ವಿಧಿವಿಧಾನಗಳಲ್ಲಿ ಅಸ್ಪೃಶ್ಯನ್ನು ದೂರವಿಟ್ಟರು. ಇದಕ್ಕೆ ಸರಿ ಸಮನಾಗಿ ಮಹಾತ್ಮ ಗಾಂಧೀಜಿಯವರು ಅಸ್ಪಶ್ಯತೆಯ ಬಗ್ಗೆ ಈ ಪ್ರಕಾರಗಳಲ್ಲಿ ತಿಳಿಸುತ್ತಾರೆ.

"ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೆ ಅಂಟಿ ಕೊಂಡಿರುವ ಮಹಾ ಕಳಂಕವೆಂದು ನಾನು ಭಾವಿಸಿದ್ದೇನೆ. ದಕ್ಷಿಣ ಆಫ್ರಿಕೆಯಲ್ಲಿಯ ಹೋರಾಟದ ಕಹಿ ಅನುಭವದಿಂದ ನನ್ನಲ್ಲಿ ಈ ಭಾವನೆಯು ಬೆಳೆದಿದೆಯೆಂದು ಕೆಲವರು ತಿಳಿಸಿದ್ದಾರೆ. ಇನ್ನು ಕೆಲವರು ನಾನು ಇಂಥ ವಿಚಾರಗಳನ್ನು ಕ್ರಿಶ್ಚಿನ್ ಧಾರ್ಮಿಕ ಗ್ರಂಥಗಳನ್ನು ಓದುವುದರಿಂದ ಪಡೆದೆನೆಂದು ಭಾವಿಸಿದ್ದಾರೆ. ಆದರೆ ಆ ಊಹೆಗಳೆಲ್ಲ ತಪ್ಪು. ನಾನು ಬೈಬಲ್‌ನಾಗಲಿ ಅದನ್ನು ಧರ್ಮಗ್ರಂಥವೆಂದು ಅನುಸರಿಸುವ ಜನರನ್ನಾಗಲಿ ಅರಿಯದೆ ಇದ್ದ ಕಾಲದಿಂದಲೂ ಅಸ್ಪೃಶ್ಯತೆಯ ಬಗ್ಗೆ ಇದೇ ವಿಚಾರಗಳು ನನ್ನಲ್ಲಿ ಬೆಳೆದು ಬಂದಿದೆ."

"ನಾನು ಆಗ ಹನ್ನೆರಡು ವರ್ಷ ವಯಸ್ಸಿನವನಿರ ಬಹುದು. ಒಬ್ಬ "ಅಸ್ಪಶ್ಯನು" ಆಗ ನಮ್ಮ ಮನೆಯ ಪಾಯಖಾನೆಗಳನ್ನು ಸ್ವಚ್ಛ ಮಡಲು ಬರುತ್ತಿದ್ದನು. "ಅವನನ್ನು ಮುಟ್ಟುವುದು ಪಾಪವೇಕೆ? ಎಂದು ನಾನು ಆಗ ನನ್ನ ತಾಯಿಯನ್ನು ಕೇಳುತ್ತಿದ್ದೆ. ನಾನು ಆಕಸ್ಮಾತಗಿ ಅವನನ್ನು ಮುಟ್ಟಿದರೂ ನನ್ನ ತಾಯಿಯು ಸ್ನಾನ ಮಾಡಲು ಹೇಳುತ್ತಿದ್ದಳು. ನಾನು ಆಗ ಹಿರಿಯರ ಮಾತನ್ನು ಮನ್ನಿಸುತ್ತಿದ್ದರೂ ಮುಗುಳ್ನಗೆಯಿಂದ ಹೇಳುತ್ತಿದ್ದೆ." "ಅಸ್ಪೃಶ್ಯತೆಗೆ ಧರ್ಮದ ಮನ್ನಣೆಯಿಲ್ಲ, ಹಾಗಿರುವುದು ಎಂದಿಗೂ ಸಾಧ್ಯವಿಲ್ಲ!" ಅಸ್ಪೃಶ್ಯರನ್ನು ಮುಟ್ಟಿದರೆ ಯಾವ ಪಾಪವು ಬರಲಾರದೆಂದು ನಾನು ತಾಯಿಗೆ ಹೇಳುತ್ತಿದ್ದೆ.[8]

ಶಾಲೆಯಲ್ಲಿ ನಾನು ಅಸ್ಪೃಶ್ಯರನ್ನು ಆಕಸ್ಮಾತ್ಮಾಗಿ ಮುಟ್ಟಿದಾಗ ನಾನು ತಂದೆ- ತಾಯಿಗಳಿಗೆ ಹಾಗೆಂದು ಹೇಳುತ್ತಿದ್ದೆ. ಆಗ ತಾಯಿಯು ದಾರಿಯಲ್ಲಿ ಹೋಗುತ್ತಿರುವ ಯಾವನಾದರೊಬ್ಬ ಮುಸಲಮಾನನ್ನು ಮುಟ್ಟಿದರೆ ಅಸ್ಪಶ್ಯರನ್ನು ಸೋಂಕಿದ ಪಾಪವು ಪರಿಹಾರವಾಗುವುದು ಎಂದು ಹೇಳುತ್ತಿದ್ದಳು. ನನ್ನ ತಾಯಿಗೆ ಗೌರವ ಕೊಡುವುದರ ಸಲುವಾಗಿ ನಾನು ಅನೇಕ ಸಲ ಅವಳು ಹೇಳಿದ ಹಾಗೆ ಮಾಡಿದೆ ಆದರೆ ಅದನ್ನು ಧಾರ್ಮಿಕ ವಿಧಿ ಎಂದು ನಾನೆಂದೂ ನಂಬಿರಲಿಲ್ಲ. ಕೆಲ ಕಾಲದ ನಂತರ ನಾವು ಪೋರ ಬಂದರಕ್ಕೆ ಹೋದೆವು. ನಾನಿನ್ನೂ ಇಂಗ್ಲೀಷ್ ಶಾಲೆಗೆ ಹೋಗಲು ಪ್ರಾರಂಭಿಸಿರಲಿಲ್ಲ. ಆಗ ನಾನು ನನ್ನ ಸೋದರನ ಜೊತೆಗೆ ಬ್ರಾಹ್ಮಣರೊಬ್ಬರಿಂದ ರಾಮರಕ್ಷಾ ಮಂತ್ರವನ್ನೂ ವಿಷ್ಣು ಪೂಜೆಯನ್ನು ಕಲಿತೆ. ಮನೆಯಲ್ಲಿ ದೀಪಗಳು ಆರಿ ಕತ್ತಲೆಯಾದಾಗ ನಾನು

ಭೂತ - ಪಿಶಾಚಿಗಳು ಬರುತ್ತವೆ ಎಂದು ಬಹಳ ಹೆದರುತ್ತಿದ್ದೆನು. ಆಗ ನಮ್ಮ ಮನೆಯ ಹತ್ತಿರ ಇರುತ್ತಿದ್ದ ಒಬ್ಬ ವೃದ್ಧೆಯು ರಾಮರಕ್ಷಾ ಮಂತ್ರವನ್ನು ಪಠಿಸಿದರೆ ಯಾವ ಭಯವೂ ಉಂಟಾಗಲಾರದೆಂದು ಹೇಳಿದ್ದಳು. ಅದರಂತೆ ನಾನು ಮಂತ್ರವನ್ನು ಪಠಿಸುತ್ತಿದ್ದೆ. ಈ ಮಂತ್ರದಲ್ಲಿ ಎಲ್ಲಿಯೂ "ಅಸ್ಪೃಶ್ಯರನ್ನು ಮುಟ್ಟುವುದು ಪಾಪ" ಎಂದು ಹೇಳಿರಲಿಲ್ಲ. ನಮ್ಮ ಮನೆಯಲ್ಲಿ ತಪ್ಪದೆ ರಾಮಾಯಣವನ್ನು ಒಬ್ಬ ಬ್ರಾಹ್ಮಣರು ಓದುತ್ತಿದ್ದರು. ಅದರಲ್ಲಿ ಈಗ "ಅಸ್ಪೃಶ್ಯವೆಂದು ಕರೆಯ ಬಹುದಾದ ಒಬ್ಬ ವ್ಯಕ್ತಿಯು ರಾಮನನ್ನು ತನ್ನ ನಾವಿನಲ್ಲಿ ಗಂಗಾ ನದಿಯ ಆಚೆಯ ದಂಡೆಗೆ ಮುಟ್ಟಿಸಿದನೆಂದು ಬರುತ್ತದೆ. ಹಾಗಾದರೆ ರಾಮಾಯಣದಲ್ಲಿ ಅಸ್ಪಶ್ಯತೆಯ ಕಲ್ಪನೆ ಇರಲಿಲ್ಲವೆಂದು ನಾನು ಭಾವಿಸಿದೆ. ನಾವು ಪರಮಾತ್ಮನನ್ನು "ಪತಿತ ಪಾವನ" ಎಂದು ಕರೆಯುವುದಿಲ್ಲವೇ ? ಅಂದ ಮೇಲೆ ಹಿಂದೂ ಧರ್ಮದಲ್ಲಿ ಜನಿಸಿದ ಒಬ್ಬ ವ್ಯಕ್ತಿಯನ್ನು "ಅಸ್ಪಶ್ಯ" ಎಂದು ಕರೆಯುವುದು ಪಾಪವಲ್ಲವೇ? ಇದು ರಾಕ್ಷಸೀಮನೋವೃತ್ತಿಯಲ್ಲವೇ? ಚಿಕ್ಕವನಿದ್ದಾಗಿನಿಂದಲೂ ಅಸ್ಪೃಶ್ಯತೆಯು ಮಹಾಪಾಪವೆಂದು ನಾನು ಹೇಳುತ್ತ ಬಂದಿದ್ದೇನೆ. ಹಾಗೆ ಎಷ್ಟು ಸಲ ಹೇಳಿದರೂ ನನಗೆ ಬೇಸರವಿಲ್ಲ. ನಾನು ಹನ್ನೆರಡು ವರ್ಷದ ಬಾಲಕನಿರುವಾಗಲೇ, ನನ್ನ ಈ ನಂಬಿಕೆ ರೂಪು ಗೊಂಡಿತ್ತೆಂದು ನಾನು ಸುಳ್ಳು ಹೇಳಲಾರೆ ಆದರೆ ಆಗಲೂ ಕೂಡಾ ಅಸ್ಪಶ್ಯತೆಯು ಪಾಪವೆಂದೇ ತಿಳಿದಿದ್ದೆ ಎಂಬುದು ನಿಜ. ವೈಷ್ಣವರು ಮತ್ತು ಸನಾತನಿ ಹಿಂದೂಗಳ ತಿಳುವಳಿಕೆಗಾಗಿ ನಾನು ಮೇಲಿನ ಕಥೆಯನ್ನೆಲ್ಲ ಹೇಳಿದ್ದೇನೆ. ಅಸ್ಪಶ್ಯರಿಗೆ ಈಗ ಕರೆಯುವ 'ಅಂತ್ಯಜ' ಎಂಬ ಹೆಸರಿನ ಬದಲಾಗಿ ಅವರನ್ನು "ಹರಿಜನ" ಎಂದು ಕರೆದರೆ ಯೋಗ್ಯವಲ್ಲವೇ? ಎಂದು ಗಾಂಧೀಜಿಯ ಮಿತ್ರನೊಬ್ಬ ಅವರಿಗೆ ಸೂಚಿಸಿದರು. ಪ್ರಸಿದ್ಧ ಸಾಧುವಾದ ನರಸಿಂಹ ಮೆಹತಾ ಈ ಶಬ್ದವನ್ನು ಉಪಯೋಗಿಸಿದ್ದಾರೆ. ಈಸಾಧುವು ಸ್ವತಃ ನಗರ ಬ್ರಾಹ್ಮಣ ಜಾತಿಯವನಾದರೂ "ಅಸ್ಪಶ್ಯರನ್ನು ತನ್ನ ಬಂಧುಗಳೆಂದು ಸ್ವೀಕರಿಸಿದನು. ಇದರ ಬಗ್ಗೆ ಈತನು ತನ್ನ ಇಡಿಯ ಸಮಾಜದ ರೋಷವನ್ನು ಎದುರಿಸಿದರು. ಇಂಥ ಮಹಾ ಪುರುಷನು ಉಪಯೋಗಿಸಿ ಪಾವನಗೊಳಿಸಿದ ಈ ಶಬ್ದವನ್ನು ನಾನು ಸಂತೋಷದಿಂದ ಸ್ವೀಕರಿಸುತ್ತೇನೆ. ಆದರೆ ನೀವು ಭಾವಿಸುವುದಕ್ಕಿಂತ ಹೆಚ್ಚಿನ ಅರ್ಥ ನಾನು ಈ ಶಬ್ದದಲ್ಲಿ ಕಾಣುತ್ತೇನೆ. ನನ್ನ ದೃಷ್ಟಿಯಲ್ಲಿ

"ಅಸ್ಪಶ್ಯನು" ನಿಜವಾಗಿಯೂ "ಹರಿಜನ" ಎಂದರೆ ದೇವನಿಗೆ ಪ್ರಿಯನು. ನಾವು "ದುರ್ಜನ"ರು ಏಕೆಂದರೆ ನಾವು ಸ್ವಚ್ಛವಾಗಿಯೂ ಬಾಳ ಬೇಕೆಂದು "ಅಸ್ಪೃಶ್ಯ"ನು ಕಷ್ಟ ಪಟ್ಟಿದ್ದಾನೆ. ಕೈಗಳನ್ನು ಹೊಲಸು ಮಾಡಿ ಕೊಂಡಿದ್ದಾನೆ. ಆದರೆ ನಾವು ಅಂಥವನನ್ನು ಹತ್ತಿಕ್ಕುವುದರಲ್ಲಿ ಸಂತೋಷ ಹೊಂದುತ್ತೇವೆ. ಈ ಅಸ್ಪಶ್ಯರಲ್ಲಿ ದೌರ್ಬಲ್ಯ ದೋಷಗಳೇನಾದರೂ ಇದ್ದರೆ ಅವುಗಳಿಗೆ ಕೇವಲ ನಾವೇ ಕಾರಣರು ನಾವೂ "ಹರಿಜನರಾಗುವುದು ಸಾಧ್ಯವಿದೆ. ಆದರೆ "ಅಸ್ಪಶ್ಯರಿಗೆ ಗೈದಿರುವ ಅನ್ಯಾಯಕ್ಕೆ ತಕ್ಕ ಪಶ್ಚಾತ್ತಾಪ ಪಟ್ಟಾಗ ಮಾತ್ರ ನಾವು ನಿಜವಾದ "ಹರಿಜನ" ರಾಗಬಲ್ಲೆವು.

ಕರ್ನಾಟಕದಲ್ಲಿ ಬ್ರಾಹ್ಮಣೇತರ ಸಂಘ ಪ್ರಬಲವಾದ ಸಂಧರ್ಭದಲ್ಲೂ ಮೈಸೂರಿನಲ್ಲಿ 1917 ರಲ್ಲಿ ಸಿ.ಆರ್ ರೆಡ್ಡಿಯರರ ನೇತೃತ್ವದಲ್ಲಿ ಸ್ಥಾಪನೆಗೊಂಡ 'ಪ್ರಜಾಮಿತ್ರ ಮಂಡಳ'ಯೂ ಕೂಡಾ ಒಂದು ರೀತಿಯಲ್ಲಿ ಬ್ರಾಹ್ಮಣ ವಿರೋಧಿ ನೀತಿಯನ್ನು ಹೋರಾಟದ ಮೂಲಕ ಗಟ್ಟಿಯಾಗಿಸಿಕೊಂಡು ಮಂಡಳಯು ಆ ಸಂದರ್ಭದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಭೇಟಿಯಾಗಿ ಮನವಿ ಪತ್ರವನ್ನೂ ಸಲ್ಲಿಸಿತು. ಇದರ ಆಧಾರದಲ್ಲಿ ಮಹಾರಾಜರು ಬ್ರಾಹ್ಮ ಣೇತರರಿಗೆ ಆಡಳತದಲ್ಲಿ ಪ್ರಾತಿನಿಧ್ಯ ಕೊಡಲು ಕ್ರಮ ಕೈಗೊಳ್ಳಲು ನ್ಯಾಯಾಧೀಶರಾದ ಸರ್.ಲೆಸ್ಲಿ ಮಿಲ್ಲರ್ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕ ಮಾಡಿದರು.[9] ಈ ಮಿಲ್ಲರ್ ಸಮಿತಿ ನೇಮಕಾತಿ ವಿಷಯ ಹಿಂದುಳದ ಜಾತಿ, ಪಂಗಡಗಳ ಶಿಕ್ಷಣದ ವಿಚಾರಗಳಿಗೆ ಆದ್ಯತೆ ನೀಡುವಂತೆ ಹಾಗೂ ಅಸ್ಪೃಶ್ಯರಿಗೆ ಪಂಚಮ ಶಾಲೆಯನ್ನೂ ಪ್ರಾರಂಭಿಸುವಂತೆ ವರದಿ ನೀಡಿದ್ದನ್ನು ಗಮನಿಸಬಹುದು ಗಾಂಧೀಯವರು ಹರಿಜನರ ಪ್ರಶ್ನೆಯನ್ನು ಹಿಂದೂ ಧರ್ಮದ ಆಂತರಿಕ ವಿಷಯವೆಂದು ಪರಿಗಣಿಸಿದ್ದರು. ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೆ ಅಂಟಿದ ಕಳಂಕವೆಂದು ಭಾವಿಸಿದ್ದರು. ಈ ಸಮಸ್ಯೆಯನ್ನು ಹರಿಜನರ ಆತ್ಮ ಶುದ್ಧೀಕರಣದ ಮೂಲಕ ಪರಿಹರಿಸಬಹುದೆಂದು ಭಾವಿಸಿದರು. ಹಾಗಾಗಿ ಆತ್ಮಶುದ್ಧೀಕರಣದ ಕಾರ್ಯ ಕ್ರಮಗಳು ಹೆಚ್ಚು ಹೆಚ್ಚು ಕಾಣಿಸಿಕೊಂಡವು ದಲಿತರನ್ನು ಹೆಚ್ಚು ಹೆಚ್ಚು ಹಿಂದೂಕರಿಸುವ ನಿಟ್ಟಿನಲ್ಲಿ ಶುಚಿತ್ವ, ಮಾಂಸಭಕ್ಷಣೆ ಹಾಗೂ ಮಧ್ಯಪಾನ ನಿಷೇಧ ಈ ಬಗೆಯ ಆಂತರಿಕ ಸುಧಾರಣಾ ಕ್ರಮಗಳಿಗೆ ಒತ್ತು ನೀಡಲಾಯಿತು. ಆದಿಕರ್ನಾಟಕ ಮತ್ತು ಆದಿದ್ರಾವಿಡರಲ್ಲಿ ಹಿಂದೂ ಧಾರ್ಮಿಕ ತತ್ವಗಳು ಮತ್ತು

ಭಕ್ತಿಭಾವಗಳು ಹೆಚ್ಚಾಗಿ ಮೂಡುವಂತೆ ಮಾಡಲು ಭಜನಾ ಮಂಡಳಿಗಳ ಸ್ಥಾಪನೆ ಅವಕಾಶ ಮಾಡಿ ಕೊಡಲಾಯಿತು. ಈ ನೆಲೆಯಲ್ಲಿ ತೊಡಗಿಸಿಕೊಂಡ ಬ್ರಾಹ್ಮಣ ಸುಧಾರಕರಲ್ಲಿ ಕುದ್ಮುಲ್ ರಂಗರಾಯರು ಒಬ್ಬರು. ದಲಿತರಿಗೆ ಒಂದು ಶಕ್ತವಾದ ರಾಜಕೀಯ ಜೀವನ ಹಾಗೂ ಉದ್ಯೋಗದ ನೆಲೆಗಟ್ಟು ಇಲ್ಲದಿದ್ದುದರಿಂದ, ಅವರಿಗೆ ಸ್ವತಂತ್ರವಾದ ರಾಜಕೀಯ ಸಂಘಟನೆಗಳನ್ನು ಕಟ್ಟಲು ಸಾಧ್ಯವಾಗಲಿಲ್ಲ.


1. ಅಖಿಲ ಭಾರತ ಮುಂಡಾಲ ಯುವ ವೇದಿಕೆ ಪ್ರಕಟಿಸಿದ ಕೃತಿ 'ಅಮೃತ ಬಿಂದು, ಪೂಜ್ಯನೀಯ ಕುದ್ಮುಲ್ ರಂಗರಾವ್, 2012, ಪುಟ, 18-20
2. ಲಕ್ಷ್ಮಣ್ ಕೊಡಸೆ, ದಲಿತೋದ್ಧಾರಕ ಗುರು ಕುದ್ಮುಲ್ ರಂಗರಾವ್, ಪ್ರಕಾಶಕರು ಕನ್ನಡ ಸಂಘ, ಕಾಂತವರ, 2015, ಪುಟಗಳು, 23
3. ಮೇಲಿನದೇ - ಪುಟಗಳು, 24-25
4. ಪಿ.ಕಮಲಾಕ್ಷ, ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, 1994, ಪುಟಗಳು, 10-11
5. ಲಕ್ಷ್ಮಣ್ ಕೊಡಸೆ, ದಲಿತೋದ್ಧಾರಕ ಗುರು ಕುದ್ಮುಲ್ ರಂಗರಾವ್, ಪ್ರಕಾಶಕರು ಕನ್ನಡ ಸಂಘ, ಕಾಂತವರ, 2015, ಪುಟಗಳು, 32-33
6. ಬಾರ್ಕೂರು ಉದಯ, ಇತಿಹಾಸದ ಶೋಧ ಗತದ ಹುಡುಕಾಟ, ತುಳು ಸಂಸ್ಕೃತಿ ಚರಿತ್ರೆ ಕಥನ, ಆಕೃತಿ ಪ್ರಿಂಟರ್ಸ್, 2015 ಪುಟಗಳು, 178-179
7. ಮೇಲಿನದೇ - ಪುಟಗಳು, 181
8. ಪ್ರೊ.ಜಿ.ಡಿ. ನಾಡಕರ್ಣಿ, 'ಅಸ್ಪೃಶ್ಯರು' ಗಾಂಧೀಯಾನ ಪಬ್ಲೀಷಿಂಗ್ ಹೌಸ್ ಬೆಂಗಳೂರು, 2011 ಪುಟಗಳು, 20-21
9. ಡಾ.ವಾಸುದೇವ ಬೆಳ್ಳೆ, ದಲಿತ ಸಂಕಥನ,2013 ಪುಟುಗಳು, 24,25

# ಅಧ್ಯಾಯ – ೦೩

## ಪರಿಶಿಷ್ಟರ ಶೋಷಣೆಯನ್ನು ಕಂಡ ರಂಗರಾಯರ ಮನಃ ಪರಿವರ್ತನೆ ಮತ್ತು ಅವರ ಕೊಡುಗೆ

- ➢ಮನಃ ಪರಿವರ್ತನೆಯ ಪ್ರಮುಖ ಘಟ್ಟ
- ➢ಶೈಕ್ಷಣಿಕ ಕ್ಷೇತ್ರದಲ್ಲಾದ ಕ್ರಾಂತಿ
- ➢ಪ್ರತ್ಯೇಕ ಕಾಲನಿಗಳ ನಿರ್ಮಾಣ
- ➢ದಿನೋದ್ಧರಣಂ, ದೇಶೋದ್ಧರಣಂ
- ➢ಶೂದ್ರರ ಏಳಿಗೆಯಲ್ಲಿ ಜ್ಯೋತಿ ಬಾಪುಲೆ ಘುಲೆ ಪಾತ್ರ
- ➢ಆಧುನಿಕ ಸಂಸದೀಯ ಸಮಾಜ ನಿರ್ಮಾಣದ ರಾಷ್ಟ್ರೀಯತೆ

## ಪರಿಶಿಷ್ಟರ ಶೋಷಣೆಯನ್ನು ಕಂಡ ರಂಗರಾಯರ ಮನಃ ಪರಿವರ್ತನೆ ಮತ್ತು ಅವರ ಕೊಡುಗೆ

- **ಮನಃ ಪರಿವರ್ತನೆಯ ಪ್ರಮುಖ ಘಟ್ಟ**

ಮಂಗಳೂರು ನಗರದ ಉತ್ತರ ಭಾಗದ ವೆಲೆನ್ಸಿಯದಲ್ಲಿ ಸರ್ಕಾರ ತೆರೆದಿದ್ದ ಶಾಲೆಯಲ್ಲಿ ಕೆಳಜಾತಿಯ ಮಕ್ಕಳನ್ನು ಸೆಳೆಯಲು ಮಧ್ಯಾಹ್ನದ ಊಟ ಒದಗಿಸಲೂ ಕ್ರಮ ಕೈಗೊಳ್ಳಲಾಗಿತ್ತು. ವೆಲೆನ್ಸಿಯ ಬಳಿ ನಂದಿಗುಡ್ಡೆ ಮುಟ್ಟಿಕಲ್ ಎಂಬಲ್ಲಿ ತೆರೆದಿದ್ದ ಆ ದಲಿತರ ಶಾಲೆಯಲ್ಲಿ ಬೆಂದೂರು ಬಾಬು ಎಂಬಾತ ನಾಲ್ಕನೇ ತರಗತಿವರೆಗೆ ಕಲಿತಿದ್ದ. ಆತ ಜಿಲ್ಲಾ ನ್ಯಾಯಾಲಯದಲ್ಲಿ ಪೇದೆಯ ಕೆಲಸಕ್ಕೆ ಅರ್ಜಿ ಹಾಕಿದ. ಆತನನ್ನು ಆಗಿದ್ದ ಬ್ರಿಟಿಷ್ ನ್ಯಾಯಾಧೀಶರು ಕೆಲಸಕ್ಕೆ ನೇಮಕ ಮಾಡಿಕೊಂಡರು. ಈ ವಿಷಯ ತಿಳಿದ ಮೇಲು ಜಾತಿಯವರು ಇದರಿಂದ ಸಮಾಜದ ಸಂಪ್ರದಾಯಕ್ಕೆ ಚ್ಯುತಿಯಾಗುವುದೆಂದು ಒಟ್ಟಾಗಿ ಪ್ರತಿಭಟಿಸಿದರು. ನ್ಯಾಯಾಲಯವನ್ನು ಬಹಿಷ್ಕರಿಸಿ, ನ್ಯಾಯಾಧೀಶರಿಗೆ ಈ ನೇಮಕದ ವಿರುದ್ಧ ಉಗ್ರವಾಗಿ ಪ್ರತಿಭಟಿಸಿ ಕೋರ್ಟ್ ಕಲಾಪಕ್ಕೆ ತಡೆ ಒಡ್ಡಿದರು. ಇದೇ ಸಂದರ್ಭದಲ್ಲಿ ಬೆಂದೂರು ಬಾಬು ನೇಮಕ ಮಾಡಿದ್ದ ಬ್ರಿಟಿಷ್ ನ್ಯಾಯಾಧೀಶರ ವರ್ಗವೂ ಆಯಿತು. ವರ್ಗವಾಗಿ ಹೋಗುವ ಮುನ್ನ ಆ ಬ್ರಿಟಿಷ್ ನ್ಯಾಯಾಧೀಶರು ಬೆಂದೂರು ಬಾಬುವನ್ನೂ ಕುದ್ಮಲ್ ರಂಗರಾವ್ ಅವರನ್ನೂ ತಮ್ಮ ಕಛೇರಿಗೆ ಕರೆಸಿದರು. ಪರಿಸ್ಥಿತಿಯನ್ನು ವಿವರಿಸಿ ಬೆಂದೂರು ಬಾಬುವನ್ನು ಮೆಲು ಜಾತಿಯವರಿಂದ ರಕ್ಷಿಸುವುದಕ್ಕಾಗಿ ಆ ನೇಮಕವನ್ನು ರದ್ದುಪಡಿಸುವುದಾಗಿ ಹೇಳಿದರು. ಜೊತೆಗೆ ರಂಗರಾವ್ ಅವರನ್ನು ಉದ್ದೇಶಿಸಿ 'ಕೋರ್ಟಿನಲ್ಲಿ ಪೇದೆ ಕೆಲಸ ಮಾಡುವುದರಿಂದ ದಲಿತರ ಉದ್ಧಾರ ಸಾಧ್ಯವಿಲ್ಲ ಅವರಿಗೆ ವಿಧ್ಯಾಭ್ಯಾಸ ಕೊಡಿಸುವಂತೆ ನೀವು ಏನಾದರೂ ಮಾಡಿ' ಎಂದು ಸಲಹೆ ಮಾಡಿದರು. ಅಲ್ಲದೆ, "ಒಬ್ಬಿಬ್ಬರನ್ನು ನ್ಯಾಯಾಲಯದಲ್ಲಿ ಪೇದೆಯಾಗಿ ಸೇರಿಸುವುದಕ್ಕಿಂತ ಕೆಳಜಾತಿಯವರಿಗೆ ಒಳ್ಳೆಯ ಶಿಕ್ಷಣವನ್ನು ಕೊಡಿಸಿ ಅವರು ಸ್ವಂತವಾಗಿ ಮೇಲೆ ಬರುವಂತೆ ಮಾಡಬಹುದಲ್ಲವೇ? ಅವರು ಆತ್ಮಗೌರವದಿಂದ ಬದುಕುವಂತೆ

ನೆರವಾಗಬಹುದಲ್ಲವೇ?' ಎಂದು ಸೂಚಿಸಿದರು. ಬಾಬು ನೇಮಕ ಹಾಗೂ ಅದಕ್ಕೆ ಮೇಲು ಜಾತಿಯವರಿಂದ ವ್ಯಕ್ತವಾದ ವಿರೋಧಗಳಂದ ವ್ಯಾಕುಲರಾಗಿದ್ದ ರಂಗರಾವ್ ಅವರಿಗೆ ನ್ಯಾಯಾಧೀಶರ ಸೂಚನೆ ತೀವ್ರವಾಗಿ ತಟ್ಟಿತು. ಮನಸ್ಸಿನಲ್ಲಿ ಸಂಕಲ್ಪ ಮಾಡಿಕೊಂಡು ಕಛೇರಿಯಿಂದ ನಿರ್ಗಮಿಸಿದರು. ಅಂದಿನಿಂದಲೇ ಅವರಿಗೆ ತಾವು ಮಾಡಬೆಕಿರುವ ಕೆಲಸ ಬೇರೆಯದೇ ಎಂದು ತೋರಿತು. ವಕೀಲಿ ವೃತ್ತಿಯಿಂದ ದೂರ ಉಳದರು. ದಲಿತ ವರ್ಗದ ಏಳಗೆಗೆ ತಮ್ಮ ಸಮಯವನ್ನು ಮೀಸಲಿಟ್ಟರು. ಕೆಳಜಾತಿಯ ಜನ ಎದುರಿಸುತ್ತಿದ್ದ ಸಮಸ್ಯೆಗಳೆಲ್ಲ ಒಂದೊಂದಾಗಿ ಅವರ ಗಮನಕ್ಕೆ ಬರತೊಡಗಿದವು. ಅವರನ್ನು ಸಮಾಜದ ಮೇಲು ಜಾತಿಯವರು ಪಶುಗಳಗಿಂತ ಕೀಳಾಗಿ ನೋಡಿಕೊಳ್ಳುತ್ತಾ ಇದ್ದುದನ್ನು ಕಂಡರು. ಅವರ ಶೋಷಣೆ ತೀವ್ರ ಸ್ವರೂಪದ್ದಾಗಿತ್ತು. ಮಾನವರು ಸಹಮಾನವರನ್ನು ಪಶುಗಳಂತೆ ಪರಿಗಣಿಸುತ್ತಿದ್ದ ಪರಿಸ್ಥಿತಿಯನ್ನು ಬದಲಾಯಿಸಲು ಸಂಕಲ್ಪ ತೊಟ್ಟರು. ಮೇಲು-ಕೀಳಿನ ಜಾತಿ ವ್ಯವಸ್ಥೆಯನ್ನು ಬದಲಿಸುವುದು ಹೇಗೆ? ಜಾತಿಪದ್ಧತಿಯ ತಾರತಮ್ಯದ ನಿವಾರಣೆ ಹೇಗೆ? ಸಾಮಾಜಿಕ ಅಸಮಾನತೆ, ಅಸ್ಪೃಶ್ಯತೆಗಳನ್ನು ತೊಡೆದುಹಾಕುವುದು ಹೇಗೆ ಎಂಬ ಚಿಂತೆಯಲ್ಲಿ ದಿನಗಳು ಕಳೆದರು. ಎಲ್ಲಾ ಮಾನವರೂ ಭಗವಂತನ ಸೃಷ್ಟಿಯಲ್ಲಿ ಸಮಾನರು ಎಂಬ ಆದರ್ಶ ತತ್ವವನ್ನು ಅನುಸರಿಸಿ ನಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳುವುದು ಹೇಗೆ ಎಂಬ ಯೋಚನೆಯಲ್ಲಿ ಮುಳುಗಿದರು.

ಕೆಳಜಾತಿಯ ಶೋಷಿತರನ್ನು ಮೇಲೆತ್ತುವ ಕೆಲಸ ತಮ್ಮ ಕರ್ತವ್ಯ ಎಂದುಕೊಂಡ ರಂಗರಾವ್ ಅವರು ಅದಕ್ಕಾಗಿ ಜೀವನೋಪಾಯಕ್ಕೆ ಮಾರ್ಗವಾಗಿದ್ದ ವಕೀಲಿ ವೃತ್ತಿಯನ್ನು ತ್ಯಜಿಸುವುದಕ್ಕೂ ಹಿಂಜರಿಯಲಿಲ್ಲ. ಆಗ ಅವರಿಗೆ ಕೇವಲ 30 ವರ್ಷ ವಯಸ್ಸಾಗಿತ್ತು. ದೃಢ ಸಂಕಲ್ಪದಿಂದ ದಲಿತರ ಏಳಗೆಗೆ ನಿರ್ಧರಿಸಿದ ಅವರು ದಲಿತರ ಜೀವನಶೈಲಿಯನ್ನು ಮೆಲುಕು ಹಾಕಿದರು. ಮೌಢ್ಯಾಚಾರಣೆ, ಅಂಧಾನುಕರಣೆ, ಕುರುಡು ನಂಬಿಕೆಗಳನ್ನು ಹೊಂದಿದ್ದ ಕೆಳಜಾತಿಯವರ ಜೀವನ ಶೈಲಿಯಲ್ಲಿ ಸುಧಾರಣೆಗೆ ಮಾರ್ಗಗಳನ್ನು ಚಿಂತಿಸಿದರು. ತಮ್ಮ

ಚಿಂತನೆಗಳನ್ನು ಬಂದು ಉಳ್ಳಾಲ ರಘುನಾಥಯ್ಯ ಅವರೊಂದಿಗೆ ಹಂಚಿಕೊಂಡರು. ಬ್ರಹ್ಮಸಮಾಜದ ಸುಧಾರಕ ಪಂಥಕ್ಕೆ ಸೇರಿದ್ದ ರಘುನಾಥಯ್ಯ ರಂಗರಾವ್ ಅವರ ಯೋಜನೆಗಳನ್ನು ಒಪ್ಪಿಕೊಂಡರು.

ಅಂದಿನ ದಿನಗಳಲ್ಲಿ ದಲಿತರಿಗೆ ಯಾವುದೇ ಶಾಲೆಗಳಲ್ಲಿ ಪ್ರವೇಶ ಇರಲಿಲ್ಲ. ಅವರನ್ನು ಮುಟ್ಟುವುದಕ್ಕೂ ಕೆಲವರು ಹೇಸುತ್ತಿದ್ದರು. ಸಾರ್ವಜನಿಕರ ಕೆರೆ, ಬಾವಿಗಳಲ್ಲಿ ಅವರ ಪ್ರವೇಶವೇ ನಿಷಿದ್ಧವಾಗಿತ್ತು. ದಲಿತರನ್ನು ವಿದ್ಯಾವಂತರನ್ನಾಗಿ ಮಾಡುವುದು ಮತ್ತು ಅವರ ಶ್ರೇಯಸ್ಸಿಗಾಗಿ ದುಡಿಯುವುದು ಅಂದಿನ ಸಮಾಜದ ನಂಬಿಕೆಗೆ ವಿರೋಧವಾಗಿತ್ತು. 'ಶೂದ್ರರು, ದಲಿತರು ವಿದ್ಯಾವಂತರಾದರೆ, ಆರ್ಥಿಕವಾಗಿ ಪ್ರಗತಿ ಹೊಂದಿದರೆ, ಜೀತದ ಕೆಲಸಗಳನ್ನು ಯಾರು ಮಾಡುತ್ತಾರೆ?' ಎಂಬ ಭಯ ಸಮಾಜದ ಮೇಲು ಜಾತಿಗಳಲ್ಲಿತ್ತು. ಆದ್ದರಿಂದ ದಲಿತರಿಗೆ ಶಿಕ್ಷಣ ನೀಡುವುದನ್ನು ವಿರೋಧಿಸುತ್ತಿದ್ದರು.

- **ಶೈಕ್ಷಣಿಕ ಕ್ಷೇತ್ರದಲ್ಲಾದ ಕ್ರಾಂತಿ**

ಶಿಕ್ಷಣವೇ ಕೆಳಜಾತಿಯವರನ್ನು ಉದ್ಧರಿಸಲು ಇರುವ ಮಾರ್ಗ ಎಂಬುದನ್ನು ಖಚಿತಪಡಿಸಿಕೊಂಡ ರಂಗರಾವ್ ಅವರು 1892 ರಲ್ಲಿ ಮಂಗಳೂರಿನ ಉರ್ವ ಚಿಲಿಂಬಿಯಲ್ಲಿ ದಲಿತರ ಮಕ್ಕಳಿಗಾಗಿ ಒಂದು ಶಾಲೆಯನ್ನು ತೆರೆದರು. ಅದಕ್ಕಾಗಿ ಸಣ್ಣ ಹುಲ್ಲಿನ ಮನೆಯನ್ನು ಬಾಡಿಗೆಗೆ ಪಡೆದಿದ್ದರು. ಅಲ್ಲಿಗೆ ಕೆಲವೇ ಮಕ್ಕಳು ಬರುತ್ತಿದ್ದರು. ಅದನ್ನು ಸಹಿಸದ ಮೇಲು ಜಾತಿಯವರು, ಮಕ್ಕಳಿಗೆ ಕಿರಿಕುಳ ನೀಡತೊಡಗಿದರು. ಅದು ತೀವ್ರಗೊಂಡಾಗ ಅದನ್ನು ಮುಚ್ಚಿದರು. ಒಂದು ಶಾಲೆಯನ್ನು ಮುಚ್ಚಿದ್ದರಿಂದ ರಂಗರಾವ್ ಅವರ ನಿರ್ಧಾರ ಸಡಿಲವಾಗಲಿಲ್ಲ. ಅವರು ಕಂಕನಾಡಿ, ಬೋಳೂರಿನಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದರು. ಅಲ್ಲಿಗೂ ಮೇಲು ಜಾತಿಯವರ ವಿರೋಧ, ಅಸಹಕಾರ ಕಾಲಿಟ್ಟಿತು. ಶಾಲೆಯಲ್ಲಿ ದಲಿತ ಮಕ್ಕಳಿಗೆ ಪಾಠ ಮಾಡುವುದಕ್ಕೆ ಹಿಂದೂ ಶಿಕ್ಷಕರು ನಿರಾಕರಿಸಿದರು. ಈ ಪರಿಸ್ಥಿತಿಯಲ್ಲಿ ರಂಗರಾವ್ ಕ್ರೈಸ್ತ ಅಧ್ಯಾಪಕರನ್ನು ನೇಮಿಸಿಕೊಂಡರು. ಮಂಗಳೂರಿನ ಶೇಡಿಗುಡ್ಡೆಯ ಕೋರ್ಟ್‌ಗುಡ್ಡೆ ಇಳಜಾರು ಸ್ಥಳದಲ್ಲಿಯೂ

ಒಂದು ಶಾಲೆ ತೆರೆದರು. ವೃತ್ತಿಪರ ಶಿಕ್ಷಣವನ್ನು ನೀಡುವ ಕೈಗಾರಿಕೆ ತರಬೇತಿ ಶಾಲೆಯನ್ನೂ ಶೇಡಿಗುಡ್ಡೆಯಲ್ಲಿ ತೆರೆದರು. ಅಲೆಮಾರಿಯಾಗಿದ್ದ ಮೂಲನಿವಾಸಿ ಕೊರಗರ ಹತ್ತು ಕುಟುಂಬಗಳಿಗೆ ಶೇಡಿಗುಡ್ಡೆಯಲ್ಲಿಯೇ ಆಶ್ರಯ ಕೊಟ್ಟರು. ಬುಟ್ಟಿ ಹೆಣೆಯುವ ಅವರ ಕರಕುಶಲ ವೃತ್ತಿಗೆ ಅವಶ್ಯಕ ಮಾಡಿದರು.

ಶೇಡಿಗುಡ್ಡೆಯಲ್ಲಿ ದಲಿತ ವಿದ್ಯಾರ್ಥಿನಿಯರಿಗೆ ಹೆಣ್ಣು ಮಕ್ಕಳ ವಸತಿ ನಿಲಯವನ್ನು ಕಟ್ಟಿಸಿದರು. ತಾವು ಸ್ಥಾಪಿಸಿದ ಶಾಲೆಗಳಲ್ಲಿ ನಾಲ್ಕನೇ ತರಗತಿವರೆಗೆ ಕಲಿತ ದಲಿತ ಯುವಕರನ್ನು ಶಿಕ್ಷಕ ತರಬೇತಿ ಪಡೆದವರನ್ನು ತಮ್ಮ ಇತರ ಶಾಲೆಗಳಿಗೆ ಅಧ್ಯಾಪಕರಾಗಿ ನೇಮಿಸಿದರು. ಪ್ರಾರಂಭಗೊಂಡ ಕೆಲವೇ ವರ್ಷಗಳಲ್ಲಿ ರಂಗರಾವ್ ಕರಾವಳಿ ಜಿಲ್ಲೆಯ ಅತ್ತಾವರ, ಬಾಬುಗುಡ್ಡೆ, ದಡ್ಡಲಕಾಡು, ಉಳ್ಳಾಲ, ಮೂಲ್ಕಿ ಮತ್ತು ಉಡುಪಿಯ ನೆಜಾರು ಹಾಗೂ ಬನ್ನಂಜೆಯಲ್ಲಿ ಶಾಲೆಗಳನ್ನು ತೆರೆದರು. ಈ ಶಾಲೆಗಳಿಗೆ ದಲಿತರ ಮಕ್ಕಳಷ್ಟೇ ಅಲ್ಲದೆ ಇತರೆ ಹಿಂದುಳಿದ ವರ್ಗಗಳವರ ಮಕ್ಕಳೂ ಬರುತ್ತಿದ್ದರು. ರಂಗರಾವ್‌ರು ಆರಂಭಿಸಿದ ಈ ಶಾಲೆಗಳನ್ನೆಲ್ಲ ಅಗ ಪಂಚಮರ ಶಾಲೆಗಳೆಂದೇ ಹೆಸರಾಗಿದ್ದವು.

ಪಂಚಮರ ಶಾಲೆಗಳಲ್ಲಿ ಕಲಿತು ಶಿಕ್ಷಕ ತರಬೇತಿ ಪಡೆದು ಅದೇ ಶಾಲೆಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದವರ ಕೆಲವು ಹೆಸರುಗಳನ್ನು ಈಚೆಗೆ ಪತ್ತೆ ಮಾಡಲಾಗಿದೆ.[1] ಮುಂಡಪ್ಪ ಮಾಸ್ಟರ್, ಬೆಂದೂರು ಬಾಬು ಮಾಸ್ಟರ್ (ಇವರು ಕೋರ್ಟಿನಲ್ಲ ಕೆಲಸ ಪಡೆದಾಗ ಮೇಲು ಜಾತಿಯವರ ತೀವ್ರ ವಿರೋಧ ಎದುರಿಸಬೇಕಾಗಿತ್ತು), ಬ್ಯಾರಿಪಳ್ಳ ಅಂಗಾರ ಮಾಸ್ಟರ್, ಪುಟ್ಟ ಮಾಸ್ಟರ್, ಬಸವ ಮಾಸ್ಟರ್, ಕಾಪಿಕಾಡ್ ಪದ್ದು ಮಾಸ್ಟರ್, ಗುರುವ ಮಾಸ್ಟರ್, ಜೆ.ಬಾಬು ಮಾಸ್ಟರ್, ಯು.ಕೋಟಿ ಮಾಸ್ಟರ್, ಗೋವಿಂದ ಮಾಸ್ಟರ್ (ಉಡುಪಿ).

ರಂಗರಾವ್ ಅವರು ದಲಿತರ ಮಕ್ಕಳ ಮೈ ಕೈ ತೊಳೆದು, ಅವರನ್ನು ಶುಚಿಗೊಳಿಸುತ್ತಿದ್ದರು. ದಲಿತರ ಮನೆಗಳಿಗೆ ಹೋಗಿ ಮಕ್ಕಳ ತಲೆ ನೇವರಿಸಿ, ಅವರ ಜೊತೆ ಕುಳಿತು ಊಟ ಮಾಡಿದರು.

ದಲಿತರ ಹಟ್ಟಿಗಳಲ್ಲಿ ಮಲಗಿ ಅವರ ಮನಸ್ಸು ಗೆದ್ದರು. ಅವರ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ಮನ ಒಲಿಸಿದರು. ಪಂಚಮ ಶಾಲೆಗಳಿಗೆ ಬರುತ್ತಿದ್ದ ಮಕ್ಕಳ ಹಾಜರಾತಿಯನ್ನು ಉತ್ತಮಪಡಿಸಲು ಅವರಿಗೆ ಪ್ರೋತ್ಸಾಹ ಧನ ನೀಡುವ ಯೋಜನೆಯನ್ನು ರಂಗರಾವ್ ಅವರು ಆರಂಭಿಸಿದ್ದರು. ಶಾಲೆಗೆ ಹಾಜರಾಗುವ ದಿನ ಎರಡರಿಂದ ನಾಲ್ಕು ಕಾಸಿನಂತೆ ಮಕ್ಕಳಿಗೆ ಕೊಡಲಾಗುತ್ತಿತ್ತು. ಇದು ಮಕ್ಕಳನ್ನು ಶಾಲೆಗೆ ಕಳುಹಿಸುವುದಕ್ಕೆ ಅವರ ಹೆತ್ತವರಿಗೂ ಉತ್ತೇಜನಕಾರಿಯಾಗಿತ್ತು. ಎರಡು ಕಾಸಿಗೂ ಅಗ ಬೆಲೆ ಇದ್ದ ಕಾರಣ ಮಕ್ಕಳನ್ನು ಶಾಲೆಗೆ ಕಳುಹಿಸುವುದು ಲಾಭದ ಅಂಶ ಕೂಡ ಆಗಿತ್ತು.

ತಮ್ಮ ಸ್ವಂತದ ದುಡಿಮೆ ಹಾಗೂ ಗೆಳೆಯರ ಉದಾರ ನೆರವಿನಿಂದ ಹೀಗೆ ಪಂಚಮರ ಶಾಲೆಗಳನ್ನು ನಡೆಸುತ್ತಿದ್ದ ರಂಗರಾವ್‌ರವರು ತಮ್ಮೆಲ್ಲ ಚಟುವಟಿಕೆಗಳಿಗೆ ಅಗತ್ಯವಾಗಿ 1897ರಲ್ಲಿ ಮಂಗಳೂರಿನ ಕೊಡಿಯಬೈಲಿನಲ್ಲಿ 'ಡಿಪ್ರೆಸ್ಡ್ ಕ್ಲಾಸಸ್ ಮಿಷನ್' (ಡಿಸಿಎಂ) ಎಂಬ ಸಂಘಟನೆಯನ್ನು ಹುಟ್ಟುಹಾಕಿದರು. ಅದಕ್ಕೆ ಬ್ರಹ್ಮಸಮಾಜದ ರಘುನಾಥಯ್ಯ ಅವರನ್ನು ಕಚೇರಿ ಕಾರ್ಯದರ್ಶಿಯಾಗಿ ಆಯ್ಕೆ ಮಾಡಿಕೊಂಡರು.

ತಮ್ಮ ಡಿಸಿಎಂ ಸಂಸ್ಥೆಯ ಧ್ಯೇಯೋದ್ದೇಶಗಳ ಬಗ್ಗೆ ರಂಗರಾವ್ ಅವರಲ್ಲಿ ಸ್ಪಷ್ಟನೆ ಇತ್ತು. ದಲಿತರಿಗೆ ಶಿಕ್ಷಣ, ಅವರಿಗೆ ಉದ್ಯೋಗ ಮತ್ತು ಅವರು ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಕೊಳ್ಳುವಂತೆ ಸನ್ನಡತೆಯ ಧಾರ್ಮಿಕ ಶಿಕ್ಷಣ ನೀಡುವುದು ಅವರ ಪ್ರಮುಖ ಉದ್ದೇಶವಾಗಿತ್ತು. ಅವರ ಎಲ್ಲ ಚಟುವಟಿಕೆಗಳೂ ಡಿಸಿಎಂ ಸಂಸ್ಥೆಯ ಮೂಲಕವೇ ನಡೆಯುವಂತೆ ಕಚೇರಿ ಹಾಗೂ ಸಿಬ್ಬಂದಿಯ ವ್ಯವಸ್ಥೆಗಳನ್ನು ಮಾಡಿಕೊಂಡರು.

ದಲಿತರ ಬದುಕಿನ ಬವಣೆಯನ್ನು ಚೆನ್ನಾಗಿ ಅರಿತಿದ್ದ ರಂಗರಾವ್ ಅವರು ಅವರ ಜೀವನಶೈಲಿಯಲ್ಲಿ ಬದಲಾವಣೆ ತರುವುದರಲ್ಲಿ ಆಸಕ್ತಿವಹಿಸಿದರು. ಅವರು ಗಮನಿಸಿದ್ದಂತೆ ಆಗಿನ ದಲಿತರ ಸಮುದಾಯ ಪ್ರಾಣಿಗಳಂತೆ ಬದುಕುವುದಕ್ಕೆ ಒಗ್ಗಿ ಹೋಗಿತ್ತು. ಹೊಟ್ಟೆ ಬಟ್ಟೆಯ ಕನಿಷ್ಠ ಅಗತ್ಯತೆಗಳನ್ನು ಪೂರೈಸುವುದಕ್ಕೆ ಮೇಲು ಜಾತಿಯವರ ತೋಟ, ಪ್ಲಾಂಟೇಶನ್ನುಗಳಲ್ಲಿ ಗಾಣದ

ಎತ್ತುಗಳಂತೆ ದುಡಿಯುತ್ತಿದ್ದರು. ತಾವೂ ಮನುಷ್ಯರು ಎಂಬುದನ್ನು ಮರೆತವರಂತೆ ಕನಿಷ್ಠ ರೀತಿಯಲ್ಲಿ ಬದುಕುತ್ತಿದ್ದರು. ಸ್ವಂತದ ಅಗತ್ಯ ಬೇಡಿಕೆಗಳ ಬಗ್ಗೆ ಅವರಿಗೆ ಕಿಂಚಿತ್ತೂ ಅರಿವು ಇರಲಿಲ್ಲ. ದಟ್ಟ ಕಾಡುಗಳಲ್ಲಿ ಬಿದಿರುಗಳು ಜೋಡಿಸಿ ಹುಲ್ಲಿನ ಮಾಡುಗಳನ್ನು ಕತ್ತರಿ ಆಕಾರದಲ್ಲಿ ನಿರ್ಮಿಸಿಕೊಳ್ಳುತ್ತಿದ್ದರು. ಅವರ ಗುಡಿಸಲುಗಳನ್ನು "ಕೊಪ್ಪ" ಎಂದು ಕರೆಯಲಾಗುತ್ತಿತ್ತು. ಮೈ ಮುಚ್ಚಿಕೊಳ್ಳಲು ಬಟ್ಟೆಯಿಲ್ಲದೆ ಮೇಲು ಜಾತಿಯವರು ಉಟ್ಟು ಬಿಸಾಕಿದ ಚಿಂದಿ ಬಟ್ಟೆಗಳನ್ನು ಧರಿಸುತ್ತಿದ್ದರು. ಬೇಟೆಯಾಡಿದ ಪ್ರಾಣಿಗಳು, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದ ಅವರಿಗೆ ನಾಳೆಗೆ ಏನು ಎಂಬುದೇ ಅನಿಶ್ಚಿತವಾಗಿತ್ತು. ಕಷ್ಟಪಟ್ಟು ದುಡಿಯಬಲ್ಲ ಆ ಜನ ಮೌಢ್ಯದ ಮೊತ್ತವಾಗಿದ್ದರು. ಹಿಂದಿನ ಜನ್ಮದ ಪಾಪಕರ್ಮಗಳಿಂದ ಈ ಜನ್ಮದಲ್ಲಿ ಅಂಥ ದುರವಸ್ಥೆಯಲ್ಲಿರವುದೆಂಬ ಭಾವ ಅವರ ತಲೆಯೊಳಗೆ ತುಂಬಿ ಹೋಗಿತ್ತು.

ಈ ನತ ದೃಷ್ಟ ಜನರ ಬದುಕಿನಲ್ಲಿ ಬದಲಾವಣೆ ತರುವುದಕ್ಕೆ ರಂಗರಾವ್ ಚಿಂತಿಸಿದರು. ಅವರೆಲ್ಲ ಶಿಕ್ಷಣ ಪಡೆದು ಸಮಾಜದ ಉಳಿದವರಂತೆ ಸುಸಂಸ್ಕೃತರಾಗಿ ಬದುಕುವ ಕನಸು ಕಂಡರು. ದಲಿತರು ಮತ್ತು ಗುಡ್ಡಗಾಡುಗಳಲ್ಲಿ ನೆಲೆಸಿದ್ದ ಗಿರಿಜನರು ಶಿಕ್ಷಣ ಗಳಿಸಿ ಸಮಾಜದ ಎಲ್ಲರ ಜೊತೆಗೆ ಸಹ ಮಾನವರಾಗಿ ಬದುಕುವಂತೆ ನೋಡುವುದು ಅವರ ಏಕೈಕ ಗುರಿಯಾಗಿತ್ತು. ತಮ್ಮ ಶಾಲೆಗಳಲ್ಲಿ ಕಲಿತವರು ಸಣ್ಣ ಸಣ್ಣ ಕೌಶಲ್ಯಗಳನ್ನು ಕಲಿತು ಸ್ವಂತವಾಗಿ ಗಳಿಸಿ ಸ್ವಾವಲಂಬಿಯಾಗುವಂತೆ ಮಾಡುವುದು ಅವರ ಉದ್ದೇಶವಾಗಿತ್ತು. ಅವರೆಲ್ಲ ಸ್ವಂತ ಉದ್ಯೋಗ ಮಾಡುವುದು ಎಣಿಸಿದಷ್ಟು ಸುಲಭವಿರಲಿಲ್ಲ. ಅದಕ್ಕೆ ಹಣ ಬೇಕಿತ್ತು. ಮೇಲು ಜಾತಿಯವರ ವಿರೋಧವಂತೂ ಇದ್ದೇ ಇತ್ತು. ಆದರೂ ಸಿಂಹದ ಹೃದಯದಂತೆ ತಮ್ಮ ಗುರಿಯಲ್ಲಿ ಸದೃಢರಾಗಿದ್ದ ರಂಗರಾವ್ ಅವರು ತಮಗೆ ಎದುರಾದ ಸಂಕಷ್ಟಗಳನ್ನೆಲ್ಲ ನಿವಾರಿಸಿಕೊಂಡು ದಲಿತರ ಬದುಕಿನಲ್ಲಿ ಸುಧಾರಣೆಯನ್ನು ತರುವ ಮಾರ್ಗದಲ್ಲಿ ಮುನ್ನಡೆದರು.

ದಲಿತರಿಗೆ ಸ್ವತಂತ್ರವಾಗಿ ದುಡಿಯುವ ಅವಕಾಶ ಸಿಗುವುದು ಅವರಿಗೆ ಭೂಮಿಯ ಒಡೆತನ ಬಂದಾಗ ಎಂಬುದು ಅವರ ವಿಶ್ವಾಸವಾಗಿತ್ತು. ಜಿಲ್ಲೆಯ ಅಂದಿನ ಶ್ರೀಮಂತರಿಂದ ಜಮೀನನ್ನು

ಕ್ರಯಕ್ಕೆ ಹಾಗೂ ಮೂಲಗೇಣಿಗೆ ಪಡೆದು ದಲಿತರಿಗೆ ಕೃಷಿ ಮಾಡಲು ಹಾಗೂ ಮನೆಗಳನ್ನು ಕಟ್ಟಿಕೊಳ್ಳಲು ವಿತರಿಸಿದರು. ಅವರು ಉಪವೃತ್ತಿ ಕೈಗೊಳ್ಳಲು ನೆರವು ನೀಡಿದರು.

ಉಡುಪಿ ಮತ್ತು ಪುತ್ತೂರಿನಲ್ಲಿ ಕೊರಗರಿಗೆ ದರಖಾಸ್ತು ಜಮೀನುಗಳನ್ನು ಕೊಡಿಸಿದರು. ಬಿಜೈ ಕಾಪಿಕಾಡು, ದಡ್ಡಲಕಾಡು ಮತ್ತು ಇನ್ನಿತರ ಕಾಲೋನಿಗಳಲ್ಲಿ ದಲಿತರಿಗೆ ಜಮೀನು ವಿತರಣೆ ಮಾಡುವಾಗ ರಂಗರಾವ್ ಅವರು 'ಜಮೀನನ್ನು ದಲಿತರಲ್ಲದವವರಿಗೆ ಯಾವ ಕಾರಣದಿಂದಲೂ ಪರಭಾರೆ ಮಾಡಬಾರದು. ದಲಿತರಿಗೆ ಪರಭಾರೆ ಮಾಡುವುದಿದ್ದರೂ ತಮ್ಮ ಡಿಸಿಎಂ ಸಂಸ್ಥೆಯ ಅನುಮತಿ ಪಡೆಯಬೇಕು' ಎಂಬ ನಿಬಂದನೆ ವಿಧಿಸಿದ್ದರು. ಅದಕ್ಕಾಗಿ ಆಗಿನ ಜಮೀನ್ದಾರರುಗಳಿಂದ ಲಭ್ಯವಿದ್ದ ಜಮೀನು ಕೊಂಡರು. ಕೆಲವು ಕಡೆ ಆಗ ಪ್ರಚಲಿತವಿದ್ದ ಮೂಲಗೇಣಿಗೆ ಇಲ್ಲವೇ ಚಾಲಗೇಣಿಗೆ ಗದ್ದೆಗಳನ್ನು ವಹಿಸಿಕೊಂಡರು. ಮೂಲಗೇಣಿಯಿಂದ ಪಾರಂಪರಿಕ ಹಕ್ಕು ಬರುವುದಿತ್ತು. ಚಾಲಗೇಣಿಯಿಂದ ತತ್ಕಾಲಕ್ಕೆ ಬೇಸಾಯಕ್ಕೆ ಭೂಮಿ ಸಿಗುತ್ತಿತ್ತು. ಹೀಗೆ ಪಡೆದ ಜಮೀನನ್ನು ಈ ದಲಿತರಿಗೆ ನೀಡಿ ಬೇಸಾಯ ಕೈಗೊಳ್ಳಲು ಉತ್ತೇಜಿಸಿದರು. ಅವರಿಗೆ ವಾಸಕ್ಕೆ ಮನೆಗಳನ್ನೂ ನಿರ್ಮಿಸಿ ಕೊಟ್ಟರು.

- **ಪ್ರತ್ಯೇಕ ಕಾಲಾನಿಗಳ ನಿರ್ಮಾಣ**

ಮಂಗಳೂರು ಸನಿಹದ ಕಾಪಿಕಾಡಿನಲ್ಲಿ ದಲಿತರಿಗಾಗಿ ಪ್ರತ್ಯೇಕ ಕಾಲನಿಯನ್ನು ನಿರ್ಮಿಸಿದರು. ಅಲ್ಲೊಂದು ಸಭಾಭವನವನ್ನೂ ಕಟ್ಟಿಸಿದರು. ಆ ಸಭಾಭವನದಲ್ಲಿ ನಿತ್ಯವೂ ಸೇರಬೇಕು. ಪ್ರಾರ್ಥನೆ, ಭಜನೆಗಳನ್ನು ಹಾಡಬೇಕು ಎಂದು ಅಲ್ಲಿನ ನಿವಾಸಿಗಳಿಗೆ ತಾಕೀತು ಮಾಡಿದರು. ಅದರಂತೆ ಪ್ರತೀ ಶನಿವಾರ ಸಂಜೆ ಸಭಾಭವನದಲ್ಲಿ ಸೇರುತ್ತಿದ್ದ ದಲಿತರು ಭಜನೆ ಹಾಗೂ ಸಾಮಾಹಿಕ ಪ್ರಾರ್ಥನೆಗಳನ್ನು ಮಾಡಲಾರಂಭಿಸಿದರು. ಅದೊಂದು ಸಾರ್ವಜನಿಕ ಕೂಟದಂತೆ ಇತ್ತು. ಅಲ್ಲಿ ಅವರ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವುದಕ್ಕೂ ಉತ್ತೇಜನವಿತ್ತು. ಅಲ್ಲಿನ ನಿವಾಸಿಗಳಿಗೆಲ್ಲ ಕೇಶ ಮುಂಡನ ಮಾಡಿಸಿ, ಅವರೆಲ್ಲ ಸನಿಹದಲ್ಲಿದ್ದ ತೊರೆಯಲ್ಲಿ ಸ್ನಾನ ಮಾಡುವಂತೆ ರಂಗರಾವ್ ಅವರು ಹೇಳುತ್ತಾ

ಇದ್ದುದರಿಂದ ದಲಿತರು ದೇವಾಲಯಗಳ ಬಳಿ ಸುಳಿಯುವುದಕ್ಕೆ ಮೊದಲು ಸ್ನಾನ ಮಾಡುವ ಅಭ್ಯಾಸವನ್ನು ರೂಢಿಸಿಕೊಂಡರು.

ಡಿಸಿಎಂ ಸಂಸ್ಥೆಯ ಮೂಲಕ ವಿತರಿಸಿದ್ದ ಜಮೀನಿನ ಬಗ್ಗೆ ಕೆಲವು ಕಟ್ಟಳೆಗಳನ್ನೂ ರಂಗರಾವ್ ಅವರು ವಿಧಿಸಿದ್ದರು. ಮೊಟ್ಟಮೊದಲನೆಯದಾಗಿ ಅವರು ತಮಗೆ ನೀಡಲಾಗಿದ್ದ ಜಮೀನನ್ನು ಯಾರಿಗೂ ಮಾರುವಂತಿರಲಿಲ್ಲ. ಮಾರುವುದಿದ್ದರೂ ತಮ್ಮಂತೆ ದಲಿತರಿಗೆ ಮಾತ್ರವೇ ಮಾರಬಹುದಿತ್ತು. ಬಿಜೈ ಕಾಪಿಕಾಡು ಮತ್ತು ದಡ್ಡಲಕಾಡು ಬಳಿ ದಲಿತರಿಗಾಗಿ ನಿರ್ಮಿಸಿದ್ದ ಎರಡೂ ಕಾಲನಿಗಳಿಗೆ ಪ್ರವೇಶ ದ್ವಾರಗಳನ್ನು ನಿರ್ಮಿಸಿ ಅವುಗಳಿಗೆ ದೊಡ್ಡ ಗೇಟುಗಳನ್ನು ಹಾಕಿಸಿದ್ದರು. ಪೊಲೀಸರು, ಸರ್ಕಾರಿ ಅಧಿಕಾರಿಗಳು ಇಲ್ಲವೆ ಇನ್ನಿತರರು ಆ ಕಾಲೊನಿಗಳಿಗೆ ಪ್ರವೇಶಿಸುವುದಿದ್ದರೆ ಅವರು ರಂಗರಾವ್ ಅವರ ಅನುಮತಿ ಪಡೆಯಬೇಕಿತ್ತು. ದಲಿತರ ವಸತಿ ಪ್ರದೇಶಗಳಲ್ಲಿ ಶಿಸ್ತನ್ನು ತರುವುದಕ್ಕೆ ಅವರು ಈ ಕಟ್ಟುಪಾಡನ್ನು ತಂದಿದ್ದರು. ಅಮಾಯಕ ದಲಿತರನ್ನು ಹಾದಿ ತಪ್ಪಿಸಲು ಮೇಲು ಜಾತಿಯವರು ನಡೆಸುತ್ತಿದ್ದ ವಿಕೃತ ಹುನ್ನಾರವನ್ನು ಎದುರಿಸಲು ರಂಗರಾವ್ ಈ ಎಚ್ಚರಿಕೆ ವಹಿಸಿದ್ದರು.

ದಲಿತರಿಗೆ ಪ್ರತ್ಯೇಕ ವಸತಿ ಕಾಲನಿಗಳನ್ನು ಕಟ್ಟಿಸಿದ ಪ್ರಯೋಗವನ್ನು ಇತರ ಕಡೆಗೂ ವಿಸ್ತರಿಸಿದರು. ಉಡುಪಿ ಸನಿಹದ ಬನ್ನಂಜೆ, ಉದ್ಯಾವರದಲ್ಲಿ ಜಮೀನು ಹಂಚಿಕೊಟ್ಟರಲ್ಲದೆ, ಮಂಗಳೂರು ಸನಿಹದ ಪಣಂಬೂರು, ತಣ್ಣೀರುಬಾವಿ, ಬೈಕಂಪಾಡಿಯಲ್ಲಿ ಪ್ರತ್ಯೇಕ ಕಾಲೊನಿಗಳನ್ನು ರೂಪಿಸಿದರು. ಮಂಗಳೂರಿನ ಬಾಬುಗುಡ್ಡೆಯಲ್ಲಿ ಒಂದಿಷ್ಟು ಜಮೀನನ್ನು ದಲಿತರಿಗೆ ಹಂಚಿಕೊಟ್ಟರು. ಅಲ್ಲಿಯೇ ಪ್ರಾಥಮಿಕ ಶಾಲೆಯೊಂದನ್ನು ಸರ್ಕಾರದ ನೆರವಿನಿಂದ ಆರಂಭಿಸಿದರು.

ರಂಗರಾವ್ ಅವರ ಸಾಮಾಜಿಕ ಸೇವೆಯನ್ನು ಗಮನಿಸುತ್ತಿದ್ದ ಅವರ ಬಂಧು ಡಾ.ಬೆನಗಲ್ ರಾಘವೇಂದ್ರರಾವ್ ಅವರು ಉಡುಪಿ ಸನಿಹದಲ್ಲಿದ್ದ ತಮ್ಮ ಸ್ವಂತ ಜಮೀನಿನಲ್ಲಿ ಏಳು ಎಕರೆಯನ್ನು

ರಂಗರಾವ್ ಅವರಿಗೆ ದಾನ ಕೊಟ್ಟರು. ಅದನ್ನು ರಂಗರಾವ್ ಅವರು ಅಲ್ಲಿ ನೆಲೆ ಇಲ್ಲದ ದಲಿತ ಕುಟುಂಬಗಳಿಗೆ ಹಂಚಿಕೊಟ್ಟರು.

ಕುಂಜಿಬೆಟ್ಟು ವಸತಿ ಪ್ರದೇಶದಲ್ಲಿ ದಲಿತರಿಗಾಗಿ ಕುಡಿಯುವ ನೀರಿನ ಎರಡು ಬಾವಿಗಳನ್ನು ತೋಡಿಸಿದರು. ಅಲ್ಲದೆ, ತಮ್ಮ ಶಾಲೆಗಳಲ್ಲಿ ಶಿಕ್ಷಣ ಪಡೆದ ದಲಿತ ಮಕ್ಕಳಿಗೆ ಆಗಿನ ಪಂಚಾಯತ್ ಮತ್ತು ಮುನಿಸಿಪಾಲಿಟಿಗಳಲ್ಲಿ ಉದ್ಯೋಗ ಕೊಡಿಸಲು ಶ್ರಮಿಸಿದರು, ಈ ಬಗೆಯ ಸೇವಾ ಕರ್ಮಗಳಿಂದ ರಂಗರಾವ್ ಅವರು ದಲಿತರಲ್ಲಿ ಸಾಮಾಜಿಕ ಜಾಗೃತಿ ಮೂಡಿಸಿದರು.

ರಂಗರಾವ್ ಅವರಿಗೆ ಮೂಲಶಿಕ್ಷಣದ ಅಗತ್ಯದ ಅರಿವಿತ್ತು. ತಮ್ಮ ಶಾಲೆಗಳಲ್ಲಿ ಮೂಲ ಶಿಕ್ಷಣವನ್ನು ಜಾರಿಗೆ ತಂದಿದ್ದರು.[2] ಅಕ್ಷರ ಕಲಿಕೆಯೊಂದಿಗೆ ಒಂದಲ್ಲ ಒಂದು ಕಸಬನ್ನು ಕಲಿಸಲು ಅದ್ಯತೆ ನೀಡಿದರು. ಬಡಗಿ ಕೆಲಸ, ನೇಯ್ಗೆ, ತೋಟಗಾರಿಕೆ, ಕಸೂತಿ ಮತ್ತು ರೇಷ್ಮೆ ಹುಳಸಾಕಣೆ, ಕಸೂತಿ, ಚಿತ್ರ ಬರೆಯುವುದು, ಮೊದಲಾದವನ್ನು ಕಲಿಸಲಾಗುತ್ತಿತ್ತು. ಡಿಸಿಎಂ ಶಾಲೆಯಲ್ಲಿ ಕಲಿತಿದ್ದ ಪದ್ದು ಮಾಸ್ಟರ್ ಬನ್ನಂಜೆಯ ಅಶ್ರಮಶಾಲೆಗೆ ನಿಯೋಜಿತರಾದರು. ಅಲ್ಲಿನ ಪಂಚಮಶಾಲೆಯಲ್ಲಿ ಕಲಿತ ದಲಿತ ಯುವಕರು ಕುಂದಾಪುರ ಹಂಗಾರಕಟ್ಟೆ, ಬ್ರಹ್ಮಾವರ, ಮಲ್ಪೆ, ಚಿಟ್ಪಾಡಿ, ತೋನ್ಸೆ ಮತ್ತು ಉದ್ಯಾವರದಲ್ಲಿ ಮೂಲಶಿಕ್ಷಣದ ಪಂಚಮ ಶಾಲೆಗಳನ್ನು ಆರಂಭಿಸಿದರು.

ಕರಾವಳಿ ಪ್ರದೇಶ ಕೃಷಿಯನ್ನೆ ಆಧರಿಸಿದ್ದೆಂಬುದು ರಂಗರಾವ್ ಅವರಿಗೆ ಮನವರಿಕೆಯಾಗಿದ್ದರಿಂದ ಕೃಷಿಗೆ ಪೂರಕವಾಗಿದ್ದ ಕಸಬುಗಳನ್ನು ಕಲಿಸುವುದಕ್ಕೆ ಆಧ್ಯತೆ ನೀಡಿದರು. ದಾರ್ಶನಿಕನಂತೆ ಭವಿಷ್ಯದ ಬಗ್ಗೆ ಸ್ಪಷ್ಟತೆ ಇತ್ತು. ಅದನ್ನು ಅನುಷ್ಠಾನಕ್ಕೆ ತರುವ ಬುದ್ಧಿಮತ್ತೆಯೂ ಇತ್ತು. ಯಾವುದಾದರೊಂದು ಕೆಲಸವನ್ನು ಆರಂಭಿಸಲು ಎರಡು ಸಲ ಯೋಚನೆ ಮಾಡುತ್ತಿದ್ದರು. ಆದರೆ, ಒಮ್ಮೆ ನಿರ್ಧರಿಸಿದ ಮೇಲೆ ಅದರಿಂದ ಹಿಂದೆ ಸರಿಯುತ್ತಿರಲಿಲ್ಲ.

ಅವರು ಮಂಗಳೂರು, ತೋಕೂರು, ಬೋಳೂರು, ದಡ್ಡಲಕಾಡು, ಜೆಪ್ಪು, ಅತ್ತಾವರ, ತಲಪಾಡಿ, ಉಳ್ಳಾಲ, ಮೂಲ್ಕಿ, ಉಡುಪಿ, ಬನ್ನಂಜೆ, ನೇಜಾರು, ಪುತ್ತೂರು ಮುಂತಾದ ಕಡೆ ಸ್ಥಾಪಿಸಿದ

ಶಾಲೆಗಳನ್ನು ಹಲವು ವರ್ಷಗಳ ಕಾಲ ತಾವೇ ಸ್ವಂತವಾಗಿ ಡಿಸಿಎಂ ಸಂಸ್ಥೆಯ ಮೂಲಕ ನಡೆಸಿಕೊಂಡು ಬಂದರು. ಆದರೆ ನಂತರ ಆರ್ಥಿಕ ಬಿಕ್ಕಟ್ಟಿನ ಕಾರಣ ಕೆಲವನ್ನು ಸರ್ಕಾರದ ವಶಕ್ಕೆ ಒಪ್ಪಿಸಬೇಕಾಯಿತು. ಸರ್ಕಾರದ ಅನುದಾನದಿಂದ ಮುಂದೆ ಅವುಗಳು ಕಾರ್ಯನಿರ್ವಹಿಸಿದವು.



**ಅತ್ತಾವರದಲ್ಲಿರುವ ಶಾಲೆ**

ರಂಗರಾವ್ ಅವರು ದಲಿತರನ್ನು ಮುಖ್ಯವಾಹಿನಿಗೆ ತರುವುದಕ್ಕೆ ಸಾಧ್ಯವಿದ್ದ ಎಲ್ಲ ಮಾರ್ಗಗಳನ್ನೂ ಅನುಸರಿಸಿದರು. ಅವರ ಒತ್ತಡ ಹಾಗೂ ದಲಿತರ ಕಡೆಗಿದ್ದ ಮಾನವೀಯ ಕಾಳಜಿಯ ಅಂದಿನ ಸರ್ಕಾರ ಜಿಲ್ಲಾ ಮಂಡಳಿ ಹಾಗೂ ಮುನಿಸಿಪಲ್ ಕೌನ್ಸಿಲ್‌ನಲ್ಲಿ ದಲಿತರಿಗೆ ಪ್ರಾತಿನಿಧ್ಯ ನೀಡುವ ಕ್ರಾಂತಿಕಾರಕ ನಿರ್ಧಾರ ಕೈಗೊಳ್ಳಬೇಕಾಯಿತು. ರಂಗರಾವ್ ಅವರ ಆಶ್ರಮಶಾಲೆಯಲ್ಲಿ ಕಲಿತು ಅವರ ಶಾಲೆಗಳಲ್ಲಿ ಅಧ್ಯಾಪಕರಾಗಿದ್ದ ಅಂಗಾರ ಮಾಸ್ಟರ್ ಅವರನ್ನು ದಕ್ಷಿಣ ಕನ್ನಡ ಜಿಲ್ಲಾ ಮಂಡಳಿಗೆ, ಇನ್ನೊಬ್ಬ ಅಧ್ಯಾಪಕ ಗೋವಿಂದ ಮಾಸ್ಟರ್ ಅವರನ್ನು

ಮಂಗಳೂರು ಮುನಿಸಿಪಾಲಿಟಿಗೆ ದಲಿತರ ಪ್ರತಿನಿಧಿಗಳೆಂದು ಅಂದಿನ ಸರ್ಕಾರ ನಾಮಕರಣ ಮಾಡಿತು.

ದಲಿತರ ಆರ್ಥಿಕ ಚೈತನ್ಯ ಸುಧಾರಣೆಯಾಗಿ ಅವರಲ್ಲಿ ಹಣಕಾಸು ನಿರ್ವಹಣೆಯಲ್ಲಿ ಶಿಸ್ತು ಬರುವಂತೆ ರಂಗರಾವ್ ಅವರು ಅವರಿಗಾಗಿ ಒಂದು ಸಹಕಾರ ಸಂಘವನ್ನು ಆರಂಭಿಸಿದರು. ಮಂಗಳೂರಿನ ಶೇಡಿಗುಡ್ಡೆಯಲ್ಲಿ "ಕೋರ್ಟ್ ಹಿಲ್ ಆದಿದ್ರಾವಿಡ ಸಹಕರ ಸಂಘ" ಕರಾವಳಿ ಭಾಗದ ಆರಂಭದ ಸಹಕಾರ ಸಂಘಗಳಲ್ಲಿ ಒಂದಾಗಿತ್ತು. ದೇಶದಲ್ಲಿಯೇ ದಲಿತರಿಗಾಗಿ ಆರಂಭವಾದ ಮೊದಲ ಸಹಕಾರ ಸಂಘವೆಂದೂ ಹೇಳಬಹುದು. ಮಂಗಳೂರಿನ ಕೋರ್ಟ್‌ಹಿಲ್‌ನಲ್ಲಿ ರಂಗರಾವ್ ಅವರು ಹೈಸ್ಕೂಲ್ ಒಂದನ್ನು ಆರಂಭಿಸಿದ್ದರು. ಅಲ್ಲಿ ಎಂಟನೇ ತರಗತಿಯವರೆಗೆ ಕಲಿಯುವ ಅವಕಾಶವಿತ್ತು. ಅಲ್ಲಿ ದಲಿತರಲ್ಲದೆ ಇತರೆ ಮೇಲುಜಾತಿಯ ಮಕ್ಕಳೂ ಪ್ರವೇಶ ಪಡೆಯಲು ಮುಂದಾಗಿದ್ದರು ಎಂದರೆ ರಂಗರಾವ್‌ರು ಶಿಕ್ಷಣ ಸಂಸ್ಥೆಗಳು ಗಳಿಸಿದ್ದ ಸಾಮಾಜಿಕ ಮಾನ್ಯತೆಯ ಅರಿವಾಗುತ್ತದೆ. ಪಂಚಮಶಾಲೆಯಲ್ಲಿ ಓದಿ ಅಲ್ಲಿನ ಶಾಲೆಗಳಲ್ಲಿ ಶಿಕ್ಷಕರಾಗಿದ್ದ ಉಡುಪಿಯ ಗೋವಿಂದರಾವ್ ಎಂಬುವರು ಕೋರ್ಟ್‌ಹಿಲ್ ಹೈಸ್ಕೂಲಿನಲ್ಲಿ 18 ವರ್ಷಗಳ ಕಾಲ ಶಿಕ್ಷಕರಾಗಿ ಡಿಸಿಎಂ ಸಂಸ್ಥೆಗೆ ಹೆಸರು ಬರುವಂತೆ ಶ್ರಮಿಸಿದ್ದಾರೆ ಎಂಬುದು ತಿಳಿಯುತ್ತದೆ.

ರಂಗರಾವ್ ಅವರು ಕೊಡ್ಡೇಲು ಎಂಬಲ್ಲಿ ಕೊರಗರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದ ಕಾರಣ ಅವರಿಗಾಗಿ ಹೊಸದಾಗಿ ಮನೆಗಳನ್ನು ಕಟ್ಟಿಸಿಕೊಟ್ಟರು. ತಮ್ಮ ಕೋರ್ಟ್‌ಹಿಲ್ ಹೈಸ್ಕೂಲಿನಲ್ಲಿ 8ನೇ ತರಗತಿಯವರೆಗೆ ಓದಿ ಉತ್ತೀರ್ಣರಾದ ಕೆಳಜಾತಿಯ ಮಕ್ಕಳಿಗೆ ಆಗಿನ ಸರ್ಕಾರಿ ಕಾಲೇಜಿನಲ್ಲಿ ಪ್ರವೇಶ ಕೊಡಿಸುತ್ತಿದ್ದರು.

ದಲಿತರ ಬಗ್ಗೆಯಷ್ಟೇ ಅಲ್ಲದೆ, ದಲಿತ ಸಮುದಾಯದ ದೇವದಾಸಿಯರ ಏಳಿಗೆಗಾಗಿಯೂ ರಂಗರಾವ್ ಶ್ರಮಸಿದರು. ಅವರಿಗೆ ಶಿಕ್ಷಣ ನೀಡಲು ಪ್ರಯತ್ನಿಸಿದರು. ಅವರಿಗಾಗಿ ಆಶ್ರಮವೊಂದನ್ನು ಆರಂಭಿಸಿದರು. 1914 ರಿಂದ 18 ರವರೆಗೆ ನಡೆದ ಮೊದಲ ಮಹಾಯುದ್ಧದ ಸಂದರ್ಭದಲ್ಲಿ

ಮಂಗಳೂರಿನಲ್ಲಿ ಎಲ್ಲ ವಸ್ತುಗಳಿಗೂ ತೀವ್ರ ಅಭಾವವಿತ್ತು. ಆಗ ಅಕ್ಕಿ ಮತ್ತು ಸೀಮೆಎಣ್ಣೆಯನ್ನು ವಿತರಿಸುವ ಸಾಮಾಜಿಕ ಕೆಲಸವನ್ನು ಡಿಸಿಎಂ ಸಂಸ್ಥೆ ಹಮ್ಮಿಕೊಂಡಿತು.

ಅತಂತ್ರ ಸ್ಥಿತಿಯಲ್ಲಿದ್ದ ಮಹಿಳೆಯರು ಮತ್ತು ಬಾಲವಿಧವೆಯರಿಗಾಗಿ ರಂಗರಾವ್ ಅವರು ಆಶ್ರಮ ಶಾಲೆಯೊಂದನ್ನು ನಿರ್ಮಿಸುವ ಕನಸು ಕಂಡಿದ್ದರು. ಅದು ಅವರು ಬದುಕಿದ್ದಾಗ ಸಾಕಾರಗೊಳ್ಳಲಿಲ್ಲ. ಅವರ ನಿಧನದ ನಂತರ ಡಾ. ಬೆನಗಲ್ ರಾಘವೇಂದ್ರರಾವ್ ಅವರು 'ಸ್ವಾಮಿ ಈಶ್ವರಾನಂದ ಮಹಿಳಾ ಸೇವಾಶ್ರಮ'ವನ್ನು ಅವರ ನೆನಪಿಗಾಗಿ ಆರಂಭಿಸಿದರು. ಮಂಗಳೂರಿನ ಬಂಟ್ಸ್ ಹಾಸ್ಟೆಲ್ ಎದುರುಗಡೆ ಆರಂಭವಾಗಿದ್ದ ಸೇವಾಶ್ರಮವನ್ನು ರಂಗರಾವ್ ಅವರ ಬಂಧು ನಾಯಂಪಲ್ಲಿ ರಾಮರಾಯರು ನಂತರದಲ್ಲಿ ಕಂಕನಾಡಿ ಸನಿಹದ ಕುದ್ರೋಳಿಗುಡ್ಡೆಗೆ ಸ್ಥಳಾಂತರಿಸಿದರು.

ದಲಿತರ ವಿಮೋಚನೆ ಆಗಬೇಕಾದರೆ, ದಲಿತ ಮಹಿಳೆಯರ ವಿಮೋಚನೆಯೂ ಅವಶ್ಯಕವೆಂದು ರಂಗರಾವ್ ಅವರು ಅರಿತಿದ್ದರು. ದಲಿತ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಆದ್ಯತೆ ನೀಡಿದರು. ದೂರದ ಹಳ್ಳಿಗಳಿಂದ ಬರುವ ಹೆಣ್ಣುಮಕ್ಕಳಿಗಾಗಿ ಮಂಗಳೂರಿನ ಶೇಡಿಗುಡ್ಡೆಯಲ್ಲಿ ಹಾಸ್ಟೆಲು ತೆರೆದರು. ಅವರ ತೆರೆದ ಆಶ್ರಮಗಳಲ್ಲಿ ಜಾತಿ ಭೇದವಿಲ್ಲದೆ ಎಲ್ಲ ಜಾತಿಯ ಅನಾಥ, ವಿಧವೆಯರನ್ನು ಸೇರಿಸಿ ಅವರಿಗೆ ರಕ್ಷಣೆ ಹಾಗೂ ಜೀವನೋಪಾಯಕ್ಕೆ ವಿವಿಧ ವೃತ್ತಿಗಳನ್ನು ಅವಲಂಬಿಸಲು ತರಬೇತಿಯೂ ದೊರೆಯುತ್ತಿತ್ತು. ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಹವನ್ನು ನೀಡಿ ದಲಿತರ ಒಳಜಾತಿಗಳೊಂದಿಗೆ ವಿವಾಹ ಸಂಬಂಧ ಏರ್ಪಡಿಸಿದರು. ದೇವದಾಸಿಯರ ಮತ್ತು ವಿಧವೆಯರ ಮರು ವಿವಾಹ ಮಾಡಿಸಿದರು.

ರಂಗರಾವ್ ಅವರು ತಮ್ಮೆಲ್ಲಾ ಶಾಲೆ ಹಾಗೂ ಆಶ್ರಮಗಳನ್ನು ನಿರ್ಮಿಸಲು ಗಣ್ಯರಿಂದ ದೇಣಿಗೆಯನ್ನು ಕೋರುತ್ತಿದ್ದರು. ದೇವರಲ್ಲಿ ಅಪಾರ ಭಕ್ತಿ ಇದ್ದ ಅವರು ಸದಾ ತಮ್ಮ ಕೆಲಸಗಳಿಗೆ ಬೆಂಬಲ ಒದಗುವಂತೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅನೇಕ ಸಲ ಅನುಯಾಯಿಗಳು, ಮಿತ್ರರೊಂದಿಗೆ

ಮಂಗಳೂರಿನ ರಸ್ತೆಗಳಲ್ಲಿ ಪಾದಯಾತ್ರೆ ನಡೆಸಿ ದೇಣಿಗೆಯನ್ನು ಸಂಗ್ರಹಿಸುತ್ತಿದ್ದರು. ಅಕ್ಕಿ ತೆಂಗಿನಕಾಯಿ ಮತ್ತಿತ್ತರ ಸಾಮಗ್ರಿಗಳನ್ನೂ ದಾನಿಗಳಂದ ಸಂಗ್ರಹಿಸುತ್ತಿದ್ದರು. ಆಶ್ರಮದ ಮಕ್ಕಳಗೆ ನಿತ್ಯ ಊಟೋಪಚಾರಕ್ಕೆ ಎಷ್ಟು ಸಂಪನ್ಮೂಲ ಒದಗಿಸಿದರೂ ಕೊರತೆ ಬೀಳುತ್ತಿತ್ತು.



ರಂಗರಾವ್ ಅವರು ದಲಿತರ ಏಳಗೆಯ ಸುಧಾರಣಾ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾಗ ಅದನ್ನು ಮೇಲುಜಾತಿಯ ಮಡಿವಂತರು ಸಹಿಸಿಕೊಳ್ಳಲಿಲ್ಲ. ಸನಾತನಿಗಳು ವಿರೋಧಿಸಿದರು. ಸ್ವತಃ ಅವರ ಜಾತಿಯ ಸಾರಸ್ವತ ಬ್ರಾಹ್ಮಣರೂ ಬೆಂಬಲಿಸಲಿಲ್ಲ. ಬದಲಿಗೆ ಅಪಮಾನ ಪಡಿಸುತ್ತಿದ್ದರು. ಅವರಿಗೆ ಸಾರಸ್ವತ ಸಮಾಜ ಬಹಿಷ್ಕಾರ ಹಾಕಿತ್ತು. ಅವರಿಗೆ ದೇವಾಲಯಗಳಗೆ ಪ್ರವೇಶ ನಿರಾಕರಿಸಿತ್ತು. ಇದರ ವಿರುದ್ಧ ಕೋರ್ಟ್‌ಗೆ ಹೋಗಿದ್ದ ರಂಗರಾವ್ ಅವರು ನ್ಯಾಯಾಲಯದಲ್ಲಿ ಗೆಲುವು ಸಾಧಿಸಿದ್ದರು. ಮೇಲು ಜಾತಿಯವರ ಚಿತಾವಣೆಯಿಂದ ವಿವಿಧ ಸೇವಾ ವೃತ್ತಿಯಲ್ಲಿದ್ದ ಕೆಳಜಾತಿಯವರು ಕೂಡ ರಂಗರಾವ್ ಅವರನ್ನು ದೂರ ಇಡುತ್ತಿದ್ದರು. ಕ್ಷೌರಿಕರು ಕೂಡ ಕ್ಷೌರ ಮಾಡಲು ಒಪ್ಪಲಿಲ್ಲ. ರಂಗರಾವ್ ಅವರ ಹೆಣ್ಣು ಮಕ್ಕಳು ಶಾಲೆಗೆ ಹೋಗುವಾಗ ರಸ್ತೆಯಲ್ಲಿ ಸಾರ್ವಜನಿಕವಾಗಿ ಅಪಮಾನ ಮಾಡುವ ಪ್ರಯತ್ನಗಳು ನಡೆದವು. ಅದರಿಂದ ರಂಗರಾವ್ ಅವರು ಅವರಿಗಾಗಿ ಕುದುರೆಗಾಡಿಯನ್ನು ಗೊತ್ತು ಮಾಡಬೇಕಾಯಿತು. ಶಾಲೆಯ ಒಳಗಡೆಯೂ ಮೇಲು ಜಾತಿಯ ವಿದ್ಯಾರ್ಥಿಗಳು ಆ ಹೆಣ್ಣುಮಕ್ಕಳಗೆ ಕಿರುಕುಳ ನೀಡುತ್ತಿದ್ದರು.

ರಂಗರಾವ್ ರಸ್ತೆಯಲ್ಲಿ ನಡೆಯುವಾಗ ಅವರತ್ತ ಪುಂಡರು, ಕಿಡಿಗೇಡಿಗಳು ಕಲ್ಲೆಸೆಯುತ್ತಿದ್ದರು. ಅವರನ್ನು ಸಾರ್ವಜನಿಕವಾಗಿ ಅಪಮಾನಿಸುವ ಘಟನೆಗಳೂ ನಡೆಯುತ್ತಿದ್ದವು. ತಾವು ಸಾಗುತ್ತಾ ಇದ್ದುದು ದುರ್ಗಮ ಹಾದಿ ಎಂಬುದು ರಂಗರಾವ್ ಅವರಿಗೆ ಅರಿವಿತ್ತು. ಅದನ್ನು ಅವರು ನಿರೀಕ್ಷಿಸಿಯೇ ಇದ್ದರು. ಈ ಅಪಮಾನ, ಕಿರುಕುಳ, ಬೆದರಿಕೆಗಳಗೆಲ್ಲ ಅವರು ತಿಲ ಮಾತ್ರವೂ ಅಂಜಲಿಲ್ಲ. ಯಾವ ಸಂದರ್ಭದಲ್ಲಿಯೂ ಅವರು ತಾಳ್ಮೆಯನ್ನು ಕಳೆದುಕೊಳ್ಳಲಿಲ್ಲ. ಎಲ್ಲ ಅಪಮಾನಗಳನ್ನೂ ಸಹಿಸಿಕೊಂಡರು. ಅವರ ಪತ್ನಿ ರುಕ್ಮಿಣಿ ಅಮ್ಮನವರಂತೂ ಪತಿಯ ಎಲ್ಲ

ಕೆಲಸಗಳಿಗೂ ಒತ್ತಾಸೆಯಾಗಿ ನಿಂತಿದ್ದರು. ಅವರ ತ್ಯಾಗ, ಪತಿಯನ್ನು ಸಾಂತ್ವನಗೊಳಿಸುವ ತಾಳ್ಮೆ, ಮಾತುಗಳಿಂದ ರಂಗರಾವ್‌ರು ಹೊರಗಿನ ಎಲ್ಲ ಸಂಕಷ್ಟಗಳನ್ನೂ ಧೈರ್ಯವಾಗಿ ಎದುರಿಸಿದರು.

ಉಳ್ಳಾಲದ ರಘುನಾಥಯ್ಯ ಅವರೊಂದಿಗೆ ನಿಕಟವಾಗಿದ್ದ ರಂಗರಾವ್ ಬ್ರಹ್ಮಸಮಾಜದ ಆದರ್ಶಗಳಿಗೆ ಮಾರು ಹೋಗಿದ್ದರು. ರಘುನಾಥಯ್ಯ ಅವರು ಮಂಗಳೂರಿನಲ್ಲಿ ಬ್ರಹ್ಮ ಸಮಾಜದ ಶಾಖೆಯನ್ನು ತೆರೆಯಲು ಮುಂದಾದಾಗ ಅವರೊಂದಿಗೆ ರಂಗರಾವ್ ಕೈ ಜೋಡಿಸಿದ್ದರು. ಇವರೊಂದಿಗೆ ಭಾರಧ್ವಾಜ ಶಿವರಾಮ್, ಅರಸಪ್ಪ, ಕಾರ್ನಾಡು ಸದಾಶಿವ ರಾವ್ ಅವರೂ ಜೊತೆ ಸೇರಿದರು. ಇದರ ಪರಣಾಮ 1870ರ ಮೇ ತಿಂಗಳಲ್ಲಿ ಮಂಗಳೂರಿನಲ್ಲಿ ಬ್ರಹ್ಮಸಮಾಜದ ಶಾಖೆ ಅಸ್ತಿತ್ವಕ್ಕೆ ಬಂದಿತು. ಆಗ ರಂಗರಾವ್‌ರು ವಕೀಲ ವೃತ್ತಿಯನ್ನು ಆರಂಭಿಸಿದ್ದರು. ಬ್ರಹ್ಮ ಸಮಾಜದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಲೇ ದಲಿತರ ಏಳಿಗೆಯ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಶಾಲೆ, ಆಶ್ರಮ ಶಾಲೆಗಳನ್ನು ಆರಂಭಿಸಿದ್ದ ರಂಗರಾವ್ ಅವರಿಗೆ ಗೆಳೆಯರ ನೆರವು ಪ್ರಮುಖವಾಗಿತ್ತು. ಕಾರ್ನಾಡ್ ಸದಾಶಿವರಾಯರಂತೂ ತಮ್ಮ ಶಕ್ತಿ ಮೀರಿ ರಂಗರಾವ್ ಅವರ ಡಿಸಿಎಂ ಸಂಸ್ಥೆಗೆ ನೆರವು ನೀಡಿದರು.

ಕಾರ್ನಾಡ್ ಸದಾಶಿವರಾಯರು ರಂಗರಾವ್ ಅವರ ಸೇವಾತತ್ಪರತೆಗೆ ಮಾರು ಹೋಗಿದ್ದರು. ಅವರ ಕಟ್ಟಾ ಅಭಿಮಾನಿಯೂ ಆಗಿದ್ದರು. ತಮ್ಮದೆಲ್ಲವನ್ನೂ ಡಿಸಿಎಂ ಸಂಸ್ಥೆಗೆ ಸಮರ್ಪಿಸುವ ಉದಾರ ಹೃದಯದವರಾಗಿದ್ದ ಸದಾಶಿವರಾಯರು ಗಾಂಧೀಜಿಯವರ ನಾಯಕತ್ವಕ್ಕೆ ಮಾರುಹೋಗಿ ಕಾಂಗ್ರೇಸ್ ಸೇರಿದ್ದ ಕಾರಣ ಅದರ ಚಟುವಟಿಕೆಗಳಲ್ಲಿ ತೊಡಗಬೇಕಾಯಿತು. ಅಸ್ಪೃಶ್ಯತೆಯ ನಿವಾರಣೆಗಾಗಿ ಬೆಂಗಳೂರು, ಮೈಸೂರು ನಗರಗಳಲ್ಲಿ ನಡೆಯುತ್ತಿದ್ದ ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸಿ ತಮ್ಮ ರಾಷ್ಟ್ರೀಯ ಕಾಳಜಿಯನ್ನು ಹೊರಹಾಕುತ್ತಿದ್ದರು.

ಡಿಸಿಎಂ ಸಂಸ್ಥೆ ಕೈಗೆತ್ತಿಕೊಂಡಿದ್ದ ಶಾಲಾ ಕಟ್ಟಡಗಳ ನಿರ್ಮಾಣದಲ್ಲಿ ಸದಾಶಿವರಾಯರು ತಮ್ಮ ಕೈಮೀರಿ ಆರ್ಥಿಕ ನೆರವನ್ನು ನೀಡಿದರು. ಅಸ್ಪೃಶ್ಯತೆಯ ನಿವಾರಣೆಯ ಹೋರಾಟದಲ್ಲಿ

ರಂಗರಾವ್ ಅವರೊಂದಿಗೆ ಗೋಪಾಲಸ್ವಾಮಿ ಎಂಬುವರೂ ಕೈಜೋಡಿಸಿದ್ದರು. ಈ ಇಬ್ಬರು ಸಮಾಜ ಸೇವಕರು ಮಂಗಳೂರಿನಲ್ಲಿ ಸುಮಾರು ಎರಡು ತಿಂಗಳ ಕಾಲ ತಿರುಗಾಡಿ ಅಸ್ಪೃಶ್ಯತೆಯ ವಿರುದ್ಧ ಜನಜಾಗೃತಿಗೆ ಶ್ರಮಿಸಿದ್ದರು.

ರಂಗರಾವ್ ಅವರು ಆರಂಭಿಸಿದ ಪಂಚಮರ ಶಾಲೆಗಳು, ಆಶ್ರಮಗಳು, ವಿದ್ಯಾರ್ಥಿನಿಲಯಗಳು ಆದರ್ಶ ಸಂಸ್ಥೆಗಳೆಂದು ಪರಿಗಣಿತವಾಗಿದ್ದವು. ಶಿಸ್ತನ್ನು ಅಳವಡಿಸಿಕೊಂಡು ಉನ್ನತ ಮೌಲ್ಯಗಳನ್ನು ಬದುಕಿನಲ್ಲಿ ಅನುಸರಿಸುವಂತೆ ಅಲ್ಲಿ ಕಲಿಸಲಾಗುತ್ತಿತ್ತು. ವಿದ್ಯಾರ್ಥಿಗಳಿಗೆ ಸ್ವಚ್ಛತೆಯ ಪಾಠ ಕಡ್ಡಾಯವಾಗಿತ್ತು. ದಲಿತ ವಿದ್ಯಾರ್ಥಿಗಳು ಶುಭ್ರವಾದ ಬಟ್ಟೆಗಳನ್ನು ಧರಿಸುವಂತೆ ರಂಗರಾವ್ ಹೇಳುತ್ತಿದ್ದರು. ಕೊಳೆಯಾದ, ಚಿಂದಿಯಾದ ಬಟ್ಟೆಗಳನ್ನು ಧರಿಸುವುದಕ್ಕೆ ದಲಿತ ವಿದ್ಯಾರ್ಥಿಗಳಿಗೆ ಆಸ್ಪದ ಕೊಡುತ್ತಿರಲಿಲ್ಲ.

ನಿತ್ಯ ಪ್ರಾರ್ಥನೆಗೆ ಮಹತ್ವ ನೀಡಿದ್ದ ರಂಗರಾವ್, ವಿದ್ಯಾರ್ಥಿಗಳು ದಿನಕ್ಕೆ ಎರಡು ಸಲ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುವಂತೆ ಮಾಡಿದ್ದರು. ಮುಂಜಾನೆ ಐದಕ್ಕೆ ವಿದ್ಯಾರ್ಥಿಗಳು ಎದ್ದು ಸ್ನಾನ ಮುಗಿಸಿ ಪ್ರಾರ್ಥನೆಗೆ ಹಾಜರಾಗಬೇಕು. ಪ್ರಾರ್ಥನೆಯ ನಂತರ ಬೆಳಗ್ಗೆ ೮.೩೦ರ ವರೆಗೆ ಅಭ್ಯಾಸದಲ್ಲಿ ನಿರತರಾಗಬೇಕು. ನಂತರ ಉಪಹಾರ ಸ್ವೀಕರಿಸಿ ಶಾಲೆಗೆ ಹೋಗಬೇಕು. ಶಾಲೆ ಮುಗಿಸಿ ಬಂದವರು ಏನಾದರೂ ವೃತ್ತಿ ಶಿಕ್ಷಣದ ತರಬೇತಿ ಪಡೆದು ಆಟ ಆಡಬೇಕು. ಪ್ರತಿ ವಿದ್ಯಾರ್ಥಿಯ ಆರೋಗ್ಯ ಸ್ಥಿತಿಯ ಬಗ್ಗೆಯೂ ರಂಗರಾವ್ ಅವರು ಗಮನ ಇರಿಸಿದ್ದರು. ಶಿಕ್ಷಣದ ಜೊತೆಗೆ ಪಠ್ಯೇತರ ವಿಷಯಗಳಿಗೂ ಪ್ರಾಧಾನ್ಯತೆ ನೀಡಿದ್ದರು. ಮಕ್ಕಳ ದೈಹಿಕ ಹಾಗೂ ಮಾನಸಿಕ ಬೆಳವಣಿಗೆ ಅವರ ಉದ್ದೇಶವಾಗಿತ್ತು.

## • "ದೀನೋದ್ಧರಣಂ", "ದೇಶೋದ್ಧರಣಂ"

ರಂಗರಾವ್ ಅವರು ಆರಂಭಿಸಿದ ಡಿಸಿಎಂ ಸಂಸ್ಥೆಯಲ್ಲಿ ಎಲ್ಲ ಜಾತಿಯವರೂ ಇದ್ದರು. ಪಂಚಮರ ಶಾಲೆಯ ಮಕ್ಕಳು ವಿಶೇಷ ಸಂದರ್ಭಗಳಲ್ಲಿ ನಗರದ ಮುಖ್ಯಬೀದಿಗಳಲ್ಲಿ ಪ್ರಭಾತ್ ಫೇರಿ ನಡೆಸುತ್ತಿದ್ದರು.[3] ಆಗ ಅವರು ಡಿಸಿಎಂ ಸಂಸ್ಥೆಯ ಬಾವುಟ ಹಿಡಿದಿರುತ್ತಿದ್ದರು. ರಂಗರಾವ್ ಆ ಬಾವುಟದಲ್ಲಿ ಸರ್ವ ಧರ್ಮ ಸಮನ್ವಯದ ಸಂಘಟಿತ ಪ್ರಯತ್ನದಲ್ಲಿ ಅಸ್ಪೃಶ್ಯತೆಯನ್ನು ನಿವಾರಿಸುವ ಸಂಕೇತವಾಗಿ ರೂಪಿಸಿದ್ದರು. ಅದರಲ್ಲಿ ಒಬ್ಬ ಹಿಂದು, ಒಬ್ಬ ಮುಸಲ್ಮಾನ ಮತ್ತು ಒಬ್ಬ ಕ್ರೈಸ್ತ ಉನ್ನತವಾದ ವೇದಿಕೆಯಲ್ಲಿ ಕುಳಿತಿರುವಂತೆ, ಆ ವೇದಿಕೆಯ ಪಕ್ಕದಲ್ಲಿ ಚಿಕ್ಕದೊಂದು ಕೊಳ, ಅದರಲ್ಲಿ ಅರ್ಧ ಮುಳುಗಿದ ಹಂದಿ, ಕೊಳದ ತೀರದಲ್ಲಿ ಕುಳಿತ ದಲಿತ. ದಲಿತನನ್ನು ದೇಶದ ಬಾವುಟ ಹಿಡಿದು ಮೇಲೆತ್ತಲು ಸ್ವತಃ ಭಾರತಾಂಬೆ ಪ್ರಯತ್ನ ನಡೆಸುತ್ತಿರುವಂತೆ ಚಿತ್ರಗಳ ವಿನ್ಯಾಸ ರೂಪಿಸಲಾಗಿತ್ತು. ಅದನ್ನು ಡಿಸಿಎಂ ಕಛೇರಿಯವರೆಗೆ ಮೆರವಣಿಗೆಯಲ್ಲಿ ತರುತ್ತಿದ್ದರು ವಿದ್ಯಾರ್ಥಿಗಳು ಆ ಧ್ವಜವನ್ನು ಮೇಲು ಭಾಗದಲ್ಲಿ ಸ್ಪಷ್ಟವಾಗಿ 'ದೀನೋದ್ಧರಣಂ', 'ದೇಶೋದ್ಧರಣಂ' ಎಂಬ ಎರಡು ಘೋಷಕವಾಕ್ಯಗಳು ಎದ್ದು ಕಾಣುತ್ತಿದ್ದವು. ಇವು ರಂಗರಾವ್‌ರು ತಮ್ಮ ಜೀವನದ ಪ್ರಧಾನ ಧ್ಯೇಯವಾಕ್ಯಗಳಾಗಿದ್ದವು.

ರಂಗರಾವ್ ಅವರು ತಪಸ್ಸಿನಂತೆ ದಲಿತ ಸಮುದಾಯದ ಏಳಿಗೆಗಾಗಿ ನಡೆಸುತ್ತಿದ್ದ ಚಟುವಟಿಕೆಗಳನ್ನು ಗಮನಿಸಿದ ಅಂದಿನ ಸರ್ಕಾರ ಅವರ ಸೇವಾದೃಷ್ಟಿ ಹಾಗೂ ಸಮಾಜ ಸುಧಾರಣೆಯ ಚಟುವಟಿಕೆಗಳನ್ನು ನೋಡಿ ಅವರಿಗೆ 'ರಾವ್ ಸಾಹೇಬ್' ಬಿರುದನ್ನು ನೀಡಿತು. ಭಾರತೀಯ ಸಮಾಜದಲ್ಲಿ ಸೇರಿಹೋಗಿದ್ದ ಅಮಾನವೀಯ ನಡವಳಿಕೆಯಾದ ಅಸ್ಪಶ್ಯತೆಯನ್ನು ಬುಡಸಹಿತ ಕಿತ್ತು ಹಾಕಲು ರಂಗರಾವ್ ಅವರು ಆರಂಭಿಸಿದ್ದ ಹೋರಾಟವನ್ನು ಅಂದಿನ ಭಾರತ ಸರ್ಕಾರ ಹೀಗೆ ಗುರುತಿಸಿ ಗೌರವ ಸಲ್ಲಿಸಿತ್ತು.

ರಂಗರಾವ್ ಅವರು ಸ್ವದೇಶಿ ಉಡುಪಿಗೆ ಮಹತ್ವ ನೀಡುತ್ತಿದ್ದರು. ತಮ್ಮ ಸೇವಾ ಕಾರ್ಯಕ್ಕೆ ಪ್ರಚಾರವನ್ನು ಅವರೆಂದೂ ಬಯಸುತ್ತಿರಲಿಲ್ಲ. ಒಮ್ಮೆ ಶೇಡಿಗುಡ್ಡೆಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ರಾಮಚಂದ್ರನೆಂಬ ಬಾಲಕ ರಂಗರಾವ್ ಅವರನ್ನು ಪ್ರಶಂಸಿಸಿ ಕವನವೊಂದನ್ನು ರಚಿಸಿದ್ದ ಅದನ್ನು ಗೆಳೆಯರ ಎದುರು ಓದಿ ಮೆಚ್ಚುಗೆ ಗಳಿಸಿದ್ದ. ಅದರಿಂದ ಉತ್ತೇಜಿತನಾಗಿ ನಿತ್ಯವೂ ವಿದ್ಯಾರ್ಥಿನಿಲಯಕ್ಕೆ ಬರುತ್ತಿದ್ದ ರಂಗರಾವ್ ಅವರಿಗೆ ಅದನ್ನು ತೋರಿಸಿದ. ಕವನವನ್ನು ಓದಿದ ರಂಗರಾವ್ ಕಣ್ಣಲ್ಲಿ ನೀರು ತಂದುಕೊಂಡರು. ತಾವು ಕವನದಲ್ಲಿ ಪ್ರಶಂಸೆಗೆ ಪಾತ್ರವಾಗುವ ಅರ್ಹತೆ ಪಡೆದಿಲ್ಲ ಎಂದು ಭಾವಪರವಶರಾಗಿ ಹೇಳಿದ ಅವರು ಮತ್ತೆಂದೂ ಆ ಕವನವನ್ನು ಹಾಡದಂತೆ ಆ ವಿದ್ಯಾರ್ಥಿಯಿಂದ ಮಾತು ಪಡೆದರು. ತಮ್ಮ ಸ್ವಂತ ಪ್ರಚಾರಕ್ಕೆ ರಂಗರಾವ್ ತೋರಿಸುತ್ತಿದ್ದ ನಿಷ್ಕಾಳಜಿ ಹಾಗೂ ವಿರೋಧಕ್ಕೆ ಈ ಘಟನೆ ನಿದರ್ಶನ.

ರಂಗರಾವ್ ದಲಿತರ ಬಗ್ಗೆಯಷ್ಟೇ ಆಸಕ್ತಿ ತಳೆದವರಾಗಿರಲಿಲ್ಲ. ದಲಿತ ಸಮುದಾಯ ದೈವ ದೇವತೆಗಳಿಗೆ ನೀಡುವ ಪ್ರಾಣಿಬಲಿಯ ವಿರುದ್ಧವೂ ಜಾಗೃತಿ ಮೂಡಿಸುವ ಪ್ರಯತ್ನ ಕೈಗೊಂಡರು. ತಾವು ನಿರ್ಮಿಸಿಕೊಟ್ಟಿದ್ದ ಕಾಲೋನಿಗಳಲ್ಲಿ ಸಭೆ ಸೇರಿಸಿ ದೇವರಿಗೆ ಬಲಿ ಕೊಡುವ ಅನಿಷ್ಟ ಪದ್ಧತಿಯನ್ನು ಕೈಬಿಡುವಂತೆ ಹೇಳುತ್ತಿದ್ದರು. ಅದಕ್ಕೆ ಬದಲಾಗಿ ಎಲ್ಲರು ಒಟ್ಟಾಗಿ ಸಾಮೂಹಿಕವಾಗಿ ಪ್ರಾರ್ಥನೆ ಸಲ್ಲಿಸುವುದರಿಂದ ದೇವರ ಕೃಪೆಗೆ ಪಾತ್ರರಾಗಬಹುದೆಂಬ ಭರವಸೆಯನ್ನು ನೀಡುತ್ತಿದ್ದರು. ಕಾಲೊನಿಗಳಲ್ಲಿ ಸಂಜೆಯ ಹೊತ್ತು ನಡೆಸುತ್ತಿದ್ದ ಸಭೆಗಳಲ್ಲಿ ದಲಿತರಲ್ಲಿ ಒಗ್ಗಟ್ಟು, ಸೌಹಾರ್ದಭಾವ ಮೂಡಬೇಕೆಂದು ಒತ್ತಾಯಿಸುತ್ತಿದ್ದರು. ತಾವು ದಲಿತರ ಮನಃಪರಿವರ್ತನೆಗೆ ನಡೆಸುತ್ತಿದ್ದ ಸಂಜೆಯ ಸಭೆಗಳೂ ಸಾಮೂಹಿಕ ಪ್ರಾರ್ಥನೆಗಳೂ ಅವರ ನಿತ್ಯದ ನಡವಳಿಕೆಯಲ್ಲಿ ಬದಲಾವಣೆ ತಾರದಿರುವುದಕ್ಕೆ ತುಂಬ ವ್ಯಥೆಪಡುತ್ತಿದ್ದರು, ದುಃಖ ಪಡುತ್ತಿದ್ದರು.

ಒಮ್ಮೆ ಅವರು ರಸ್ತೆಯಲ್ಲಿ ವಿಚಿತ್ರ ವೇಷಗಳನ್ನು ಧರಿಸಿ ಡೋಲು, ತಮಟೆ ಹಿಡಿದುಕೊಂಡು ಕುಣಿಯುತ್ತಾ ಅಂಗಡಿಯವರಿಂದ ಕಾಸು ಕೇಳುತ್ತಾ ಇದ್ದ ಕೊರಗರನ್ನು ನೋಡಿ ತುಂಬ ನೊಂದುಕೊಂಡರು. ಅವರ ಬಳಿ ಸಾರಿ 'ಮಕ್ಕಳೇ ಹೀಗೇಕೆ ಮಾಡುತ್ತೀರಿ..' ಎಂದು ನೋವಿನಿಂದ

ಅವರನ್ನು ತಮ್ಮ ಶಾಲೆಗೆ ಕರೆದೊಯ್ದು ಸೋಮಾರಿಗಳಾಗಿ ಕಂಡಕಂಡವರೆದುರು ಹಲ್ಲುಗಿಂಜುತ್ತಾ ಬಿಕ್ಷೆ ಬೇಡಬಾರದೆಂದು ಭೋದಿಸಿದರು. ಕಷ್ಟಪಟ್ಟು ದುಡಿದು ಆತ್ಮಗೌರವದಿಂದ ಬದುಕುವಂತೆ ಅನುನಯದಿಂದ ಹೇಳಿದರು. ಅವರ ಮಾತುಗಳಲ್ಲಿದ್ದ ಆರ್ದ್ರತೆಗೆ ಯಾರಾದರು ಮನ ಸೋಲುತ್ತಿದ್ದರು. ಕೊರಗರಿಗೆ ಗೌರವದಿಂದ ಬದುಕಲು ಸ್ವಂತ ಮನೆಗಳ ಅಗತ್ಯ ಇರುವುದನ್ನು ಮನಗಂಡು ಶೇಡಿಗುಡ್ಡೆಯಲ್ಲಿ ಅವರಿಗಾಗಿ ಸಾಲು ಮನೆಗಳನ್ನು ನಿರ್ಮಿಸಿಕೊಟ್ಟರು.

ತಮ್ಮ ಮಗಳು ರಾಧಾಬಾಯಿಯನ್ನು ಮದ್ರಾಸಿನ ಡಾ. ಸುಬ್ರಾಯನ್‌ಗೆ ಕೊಡುವ ಮೂಲಕ, ತಮ್ಮ ಕುಟುಂಬದಲ್ಲಿಯೇ ಅಂತರ್ಜಾತಿ ವಿವಾಹಕ್ಕೆ ಅವಕಾಶ ಒದಗಿಸಿದರು. ಈ ಮದುವೆಯ ಪೌರೋಹಿತ್ಯವನ್ನು ಚಕ್ರವರ್ತಿ ರಾಜಗೋಪಾಲಚಾರಿ ವಹಿಸಿದ್ದರು. ಆಡಂಬರ, ವಧುದಕ್ಷಿಣೆ, ವರದಕ್ಷಿಣೆ, ದುಂದುವೆಚ್ಚಗಳಿಗೆ ಸಂಪೂರ್ಣವಾಗಿ ಕಡಿವಾಣ ಹಾಕಿದ ಈ ಮದುವೆ ಗಾಂಧೀಜಿಯವರ ಗಮನವನ್ನೂ ಸೆಳೆಯಿತು. ಅವರ ಮೇಲೆಯೂ ಪ್ರಭಾವ ಬೀರಿತು. ಮುಂದೆ ಗಾಂಧೀಜಿಯವರೇ ತಮ್ಮ ಮಗನಿಗೆ ರಾಜಾಜಿಯವರ ಮಗಳನ್ನು ಸೊಸೆಯಾಗಿ ತಂದುಕೊಂಡು ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ ನೀಡಿದರು.

ಸಾವಿರಾರು ವರ್ಷಗಳಿಂದ ಶೋಷಣೆಗೆ ಒಳಗಾದ ಜನರಿಗೆ ರಂಗರಾವ್ ಅವರು ಸ್ವಾಭಿಮಾನ ಮತ್ತು ಘನತೆಯ ಬದುಕನ್ನು ನಡೆಸಲು ಪ್ರೇರಣೆ ನೀಡಿದರು. ದಲಿತರು ತಮ್ಮ ದಾಸ್ಯದ ಸಂಕೋಲೆಗಳನ್ನು ಕಳಚಿಕೊಳ್ಳಲು ಅಗತ್ಯವಾದ ಯೋಜನೆಗಳನ್ನು ರೂಪಿಸಿ ಕೈಗೆತ್ತಿಕೊಂಡರು. ಪತ್ರಿಕೆಗಳು, ರೈಲು, ಬಸ್ಸುಗಳಿಲ್ಲದ್ದ ಆ ಕಾಲದಲ್ಲಿ ಕಾಲ್ನಡಿಗೆಯಲ್ಲಿ ಊರೂರು ಅಲೆದು ದಲಿತರಲ್ಲಿ ಹೊಸ ಚೈತನ್ಯ ತುಂಬಿದರು.

ಅಂಬೇಡ್ಕರ್ ಅವರು ಹುಟ್ಟಿದ್ದು 1891ರ ಏಪ್ರಿಲ್ 14ರಂದು, ಅವರು ಹುಟ್ಟುವ ಮೂರು ವರ್ಷ ಮೊದಲು 1888ರಲ್ಲಿ ದಲಿತರಿಗೆ ರಾಜಕೀಯ ಮೀಸಲಾತಿ ಸಿಗುವಂತೆ ಮಾಡಿದವರು ರಂಗರಾವ್. ಸ್ಥಳೀಯ ಸಂಸ್ಥೆಗಳಾದ ದಕ್ಷಿಣ ಕನ್ನಡ ಜಿಲ್ಲಾ ಬೋರ್ಡ್ ಮತ್ತು ಮಂಗಳೂರು ಮುನ್ಸಿಪಾಲ್

ಕೌನ್ಸಿಲ್‌ನಲ್ಲಿ ದಲಿತರಿಗೆ ಪ್ರಾತಿನಿಧ್ಯ ನೀಡಬೇಕೆಂದು ಅವರು ಒತ್ತಾಯಿಸಿದರು. ತಮ್ಮ ಒತ್ತಾಯಕ್ಕೆ ದಲಿತರನ್ನು ಸಂಘಟಿಸಿ ಹೋರಾಟಕ್ಕೆ ಇಳಿದರು. ಅವರ ಹೋರಾಟದ ಫಲವಾಗಿ ಪಂಚಮರ ಶಾಲೆಗಳಲ್ಲಿ ಕಲಿತು ಅಲ್ಲಿಯೇ ಶಿಕ್ಷಕರಾಗಿದ್ದ ಅಂಗಾರ ಮಾಸ್ಟರ್ ಜಿಲ್ಲಾ ಬೋರ್ಡಿಗೆ ನಾಮಕರಣ ಹೊಂದಿದರು. ಉಡುಪಿಯ ಗೋವಿಂದ ಮಾಸ್ಟರ್ ಅವರನ್ನು ಮಂಗಳೂರು ಮುನಿಸಿಪಲ್ ಕೌನ್ಸಿಲ್‌ಗೆ ನಾಮಕರಣ ಮಾಡಲಾಯಿತು.

ರಂಗರಾವ್ ಅವರು ಆಗ ಪ್ರಕಟವಾಗುತ್ತಿದ್ದ ಕೆಲವಾದರೂ ಪತ್ರಿಕೆಗಳಿಗೆ ಕರಾವಳಿಯ ದಲಿತರ ದುಃಸ್ಥಿತಿಯ ಬಗ್ಗೆ ಲೇಖನಗಳನ್ನು ಬರೆಯುತ್ತಿದ್ದರು. ಇದರಿಂದ ಅವರ ನಿಸ್ವಾರ್ಥ ಸೇವೆಯ ಖ್ಯಾತಿ ದೇಶ ವಿದೇಶಗಳಲ್ಲಿ ಹರಡಿತು. ರಾಷ್ಟ್ರೀಯ ಜಾಗೃತಿಗೆ ಅಲ್ಲಲ್ಲಿ ತಲೆ ಎತ್ತಿದ್ದ ಸ್ವಯಂ ಸೇವಾ ಸಂಘಟನೆಗಳಿಗೆ ಇಂಥ ಸುಧಾರಣೆಗಳು ಒತ್ತಾಸೆಯಾಗಿರುತ್ತಿದ್ದವು. ಭಾರತ ಸೇವಕ ಸಂಘದ (ಸರ್ವೆಂಟ್ಸ್ ಆಫ್ ಇಂಡಿಯಾ) ಚಟುವಟಿಕೆ ನಾಡಿನಲ್ಲಿ ಶಿಕ್ಷಣ ಹಾಗೂ ಸುಧಾರಣೆಯ ಅಲೆಯನ್ನು ಸೃಷ್ಟಿಸುತ್ತಿತ್ತು.

ತಾವು ಕಟ್ಟಿದ ಡಿಸಿಎಂ ಸಂಸ್ಥೆಯಿಂದ ನಿರ್ವಹಿಸಲಾಗುತ್ತಿದ್ದ ಪಂಚಮಶಾಲೆಗಳು, ಆಶ್ರಮಗಳು ಮತ್ತು ತರಬೇತಿ ಕೇಂದ್ರಗಳನ್ನು ಒಂದು ಹಂತದಲ್ಲಿ ಭಾರತ ಸೇವಕ ಸಂಘಕ್ಕೆ ಹಸ್ತಾಂತರಿಸಿದರು. ಅದಕ್ಕೆ ಆರ್ಥಿಕ ಅಡಚಣೆಯೂ ಒಂದು ಕಾರಣವಾಗಿತ್ತು. ನಂತರ ರಂಗರಾವ್ ಆಧ್ಯಾತ್ಮದತ್ತ ಒಲವು ಹರಿಸಿದರು. ಪ್ರಾರ್ಥನೆ ಹಾಗೂ ಬ್ರಹ್ಮಸಮಾಜದ ಸಭೆಗಳಲ್ಲಿ ಕನ್ನಡದಲ್ಲಿ ಪ್ರವಚನ ನೀಡುತ್ತಿದ್ದರು. ತಮ್ಮ ಭಾಷಣಗಳಲ್ಲಿ ಬ್ರಿಟಿಷರ ಆಗಮನದಿಂದ ದೇಶದ ಸಾಮಾಜಿಕ ವ್ಯವಸ್ಥೆಯಲ್ಲಿ ಆಗುತ್ತಿರುವ ಸುಧಾರಣೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಕನ್ನಡದಲ್ಲಿ ವ್ಯವಹರಿಸುವುದು ಅವರ ಮೆಚ್ಚಿನ ಸಂಗತಿಯಾಗಿತ್ತು. ದಲಿತರ ಉದ್ಧಾರಕ್ಕೆ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿದ್ದ ಅವರಿಗೆ ಅವರಲ್ಲಿಯೇ ಅತ್ಯಂತ ಹೀನ ವ್ಯವಸ್ಥೆಯಲ್ಲಿ ಉಳಿದುಕೊಂಡಿದ್ದ ತೋಟಿಗರಿಗೆ ಹೆಚ್ಚಿನ ಸಹಾಯ ಮಾಡಲಾಗಿಲ್ಲ ಎಂಬ ಕೊರಗು ಉಳಿದುಕೊಂಡಿತ್ತು.

ಗೋಪಾಲಕೃಷ್ಣ ಗೋಖಲೆಯವರು ಆರಂಭಿಸಿದ ಭಾರತ ಸೇವಕ ಸಂಘ (ಸರ್ವೆಂಟ್ಸ್ ಆಫ್ ಇಂಡಿಯಾ) ಸ್ವಾತಂತ್ರ್ಯಪೂರ್ವದಲ್ಲಿ ಸಾಮಾಜಿಕ ಸುಧಾರಣೆಗಳನ್ನು ಆರಂಭಿಸಿದ ಪ್ರಮುಖ ಸಂಸ್ಥೆಗಳಲ್ಲಿ ಒಂದು. ಅವಕಾಶ ವಂಚಿತ ಜನಸಮುದಾಯದಕ್ಕೆ ಶಿಕ್ಷಣ, ಆರ್ಥಿಕ ಪ್ರಗತಿ ಹಾಗೂ ಜೀವನಮಟ್ಟದ ಸುಧಾರಣೆಗೆ ಅವಶ್ಯಕವಾದ ವಿಧಾಯಕ ಕಾರ್ಯಕ್ರಮಗಳನ್ನು ನಿಷ್ಠೆ ಹಾಗೂ ಪ್ರಾಮಾಣಿಕತೆಯಿಂದ ಕೈಗೊಳ್ಳಲು ದೇಶವಾಸಿಗಳನ್ನು ಪ್ರೇರೇಪಿಸಿದ ಸ್ವಯಂ ಸೇವಾ ಸಂಘಟನೆ. ಈ ಸಂಸ್ಥೆಯಲ್ಲಿ ಕೆಲಸ ಮಾಡುವುದಕ್ಕೆ ಆಗ ಬ್ರಿಟಿಷ್ ಸರ್ಕಾರದಲ್ಲಿ ಉದ್ಯೋಗ ಗಳಿಸಿದ್ದ ಅನೇಕರು ತಮ್ಮ ನೌಕರಿಗಳನ್ನು ತ್ಯಜಿಸಿ ಬಂದಿದ್ದರು. ಸಮಾಜವನ್ನು ಮನಗಂಡಿದ್ದ ಭಾರತ ಸೇವಕ ಸಂಘಕ್ಕೆ ಮಂಗಳೂರಿನಲ್ಲಿಯೂ ಸೇವಾ ಕಾರ್ಯಕರ್ತರು ಸಿಕ್ಕಿದ್ದರು. ಈ ವ್ಯವಸ್ಥೆಯನ್ನು ಮನಗಂಡಿದ್ದ ರಂಗರಾವ್ ತಮ್ಮ ನಂತರವೂ ಪಂಚಮರ ಶಾಲೆ, ಆಶ್ರಮಗಳು ಹಾಗೂ ವಸತಿ ನಿಲಯಗಳ ನಿರ್ವಹಣೆ ಅಭಾಧಿತವಾಗಿ ಮುಂದುವರಿಯಲೆಂದು ಆಶಿಸಿ ಅವೆಲ್ಲವನ್ನೂ ಭಾರತ ಸೇವಾ ಸಂಘಕ್ಕೆ ವಹಿಸಿಕೊಟ್ಟರು. ಡಿಸಿಎಂ ಸಂಸ್ಥೆಯ ಚಟುವಟಿಕೆಗಳನ್ನು ನೋಡಿಕೊಳ್ಳಲು ಭಾರತ ಸೇವಕ ಸಂಘವು ಮಂಗಳೂರಿನಲ್ಲಿ ಆರ್. ಸೂರ್ಯನಾರಾಯಣರಾವ್ ಎಂಬುವರನ್ನು ನೇಮಿಸಿತು.

ತಮ್ಮ ಶಾಲೆ, ವಿದ್ಯಾರ್ಥಿನಿಲಯ ಆಶ್ರಮ ಶಾಲೆಗಳನ್ನು ಭಾರತ ಸೇವಕ ಸಂಘದ ನಿರ್ವಹಣೆಗೆ ಬಿಟ್ಟುಕೊಟ್ಟ ನಂತರವೂ ರಂಗರಾವ್ ಅವರು ಈ ಶಾಲೆಗಳಿಗೆ ಭೇಟಿ ನೀಡುವ ಅಭ್ಯಾಸ ಇಟ್ಟುಕೊಂಡಿದ್ದರು. ನಿತ್ಯದ ಪ್ರಾರ್ಥನೆ ಆದ ನಂತರ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿದ್ದರು. ಶಿಸ್ತು, ಸನ್ನಡತೆ, ಎಲ್ಲರಿಗೆ ಗೌರವ ನೀಡುವ ನಡವಳಿಕೆಗಳನ್ನು ರೂಪಿಸಿಕೊಳ್ಳುವಂತೆ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು.

ಓಂ! ತ್ವಮೇಯ ಮಾತಾ ಪಿತಾತ್ವಮೇವ
ತ್ವಮೇವ ಬಂಧೂಶ್ಚ ಸಖಾ ತ್ವಮೇವ
ತ್ವಮೇಯ ವಿದ್ಯಾದ್ರವಿಣಂ ತ್ವಮೇವ
ತ್ವಮೇವ ಸರ್ವ ಮಮ ದೇವ ದೇವಃ

(ಓ ದೇವರೇ, ತಾಯಿಯೂ ನೀನೆ, ತಂದೆಯೂ ನೀನೆ, ಬಂಧುವೂ ನೀನೆ, ಮಿತ್ರನೂ ನೀನೆ, ನೀನೇ ನನ್ನ ವಿದ್ಯೆ. ನೀನೇ ನನ್ನ ಸಂಪತ್ತು, ಸಕಲವೂ ನೀನೇ)

ಬಾಲ್ಯದಿಂದಲೂ ಅಧ್ಯಾತ್ಮ ಜೀವಿಯಾಗಿದ್ದ ಅವರು ತಮ್ಮ 65ನೆಯ ವಯಸ್ಸಿನಲ್ಲಿ ಸನ್ಯಾಸ ಸ್ವೀಕರಿಸಲು ನಿರ್ಧರಿಸಿದರು. ಬ್ರಹ್ಮಸಮಾಜದ ಸಕ್ರೀಯ ಕಾರ್ಯಕರ್ತರಾಗಿದ್ದ ಅವರಿಗೆ ಸುಧಾರಕ ಪಂಥದ ಪರಿಷ್ಕರ ಸಂಪರ್ಕಗಳಿದ್ದವು. ಸ್ವಾಮಿ ದಯಾನಂದ ಸರಸ್ವತಿ ಅವರ ಶಿಷ್ಯರಾದ ಮಹರ್ಷಿ ಮತ್ತು ಶ್ರದ್ಧಾನಂದ ಸ್ವಾಮೀಜಿ ಅವರು 1924ರಲ್ಲಿ ಮಂಗಳೂರಿಗೆ ಆರ್ಯ ಸಮಾಜದ ಕಾರ್ಯಕ್ರಮವೊಂದರ ಉದ್ಘಾಟನೆಗಾಗಿ ಬರುವವರಿದ್ದರು. ಅದೇ ಸಂದರ್ಭದಲ್ಲಿ ರಂಗರಾವ್ ಅವರಿಗೆ ಸನ್ಯಾಸ ದೀಕ್ಷೆಯನ್ನು ನೀಡುವುದೆಂದು ನಿಗದಿ ಪಡಿಸಲಾಯಿತು. ಆದರೆ ಸ್ವಾಮಿ ಶ್ರದ್ಧಾನಂದರನ್ನು ದೆಹಲಿ ಬಳಿ ಯಾರೋ ಹತ್ಯೆ ಮಾಡಿದರು. ಆಘಾತಕಾರಿಯಾದ ಈ ಸುದ್ದಿ ಬಂದ ನಂತರ ರಂಗರಾವ್ ಮೌನವಾದರು. ಆದರೆ ಸನ್ಯಾಸ ಸ್ವೀಕಾರದ ವಿಷಯದಲ್ಲಿ ಅವರು ತಳೆದಿದ್ದ ನಿರ್ಧಾರ ಅಚಲವಾಗಿತ್ತು.

1927ರಲ್ಲಿ ಮಂಗಳೂರಿಗೆ ಶ್ರದ್ಧಾನಂದ ಸ್ವಾಮೀಜಿ ಅವರ ಶಿಷ್ಯರಾದ ಸುವಿಚಾರಾನಂದ ಸ್ವಾಮೀಜಿ ಅವರು ಆಗಮಿಸಿದರು. ಅವರಿಂದ ರಂಗರಾವ್ ಅವರು ಸನ್ಯಾಸವನ್ನು ಸ್ವೀಕರಿಸಿದರು. ಸನ್ಯಾಸ ಸ್ವೀಕರಿಸಿದ ನಂತರ ಅವರ ಹೆಸರು "ಈಶ್ವರಾನಂದ ಸ್ವಾಮೀಜಿ" ಎಂದಾಯಿತು. ಲೌಕಿಕ ಬಂಧನಗಳನ್ನು ತ್ಯಜಿಸಲು ನಿರ್ಧಾರ ಕೈಗೊಂಡಿದ್ದ ರಂಗರಾವ್ ಸನ್ಯಾಸ ಸ್ವೀಕಾರ ಸಮಾರಂಭದಲ್ಲಿ ಏರ್ಪಡಿಸಿದ್ದ ಹೋಮಕುಂಡದಲ್ಲಿ ತಮ್ಮ ಸಮಾಜ ಸೇವೆಗಾಗಿ ಬ್ರಿಟಿಷ್ ಸರ್ಕಾರ ನೀಡಿದ್ದ 'ರಾವ್ ಸಾಹೇಬ್' ಬಿರುದಿನ ಪದಕ ಹಾಗೂ ಸೇವಾ ದಾಖಲೆಯ ಪತ್ರಗಳನ್ನು ಅಗ್ನಿಗೆ ಸಮರ್ಪಿಸಿದರು.

ಸನ್ಯಾಸವನ್ನು ಅಧಿಕೃತವಾಗಿ ಸ್ವೀಕರಿಸಿದ್ದರೂ ಅವರು ಅದಕ್ಕೂ ಮೊದಲು ಸನ್ಯಾಸಿಯಂತೆಯೇ ಇದ್ದರು. ಅಪರಿಗ್ರಹ ಅವರ ವ್ರತವೇ ಆಗಿತ್ತು. ತಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನಲ್ಲದೆ ಇನ್ಯಾವ ಆಸ್ತಿಯನ್ನೂ ಮಾಡಲಿಲ್ಲ. ತಮ್ಮ ಮಕ್ಕಳಿಗಾಗಿ ಅವರು ಉಳಿಸಿದ್ದೆಂದರೆ ಕದ್ರಿಯ ಶಿವಭಾಗ್‌ನಲ್ಲಿದ್ದ ಸಣ್ಣ ಮನೆ ಮತ್ತು ಅದರಲ್ಲಿದ್ದ ಅಮೂಲ್ಯವಾದ ಪುಸ್ತಕಗಳನ್ನು ಮಾತ್ರ

ಅವರ ನಿಧನಾ ನಂತರ ಈ ಆಸ್ತಿಯೂ ಅವರ ಮಕ್ಕಳಿಗೆ ಸಿಗಲಿಲ್ಲ. ಏಕೆಂದರೆ ಅವನ್ನು ಪಡೆಯುವುದಕ್ಕೆ ಅವರ ಮಕ್ಕಳು ಪ್ರಯತ್ನ ನಡೆಸಿಲ್ಲ.



**ರಂಗರಾಯರು ಕದ್ರಿ ಶಿವಭಾಗ್‌ನಲ್ಲಿದ್ದ ಮನೆ**

ಸನ್ಯಾಸ ಸ್ವೀಕರಿಸಿದ ನಂತರ ಅವರು ತಮ್ಮ ಹಿರಿಯ ಮಗಳು ಲಲಿತಾ ಬಾಯಿ ಅವರ ಮನೆಯಲ್ಲಿ ಉಳಿದುಕೊಂಡರು. ಅವರ ಆರೋಗ್ಯವೂ ಹದಗೆಡುತ್ತಿದ್ದು. ಹೃದ್ರೋಗದ ಸಮಸ್ಯೆ ಇತ್ತು. ನಿತ್ಯ ಪ್ರಾರ್ಥನೆ ಮತ್ತು ದಲಿತರ ಏಳಿಗೆಯ ಚಿಂತೆಯನ್ನು ಮನಸ್ಸಿನಲ್ಲಿ ತುಂಬ ಹಚ್ಚಿಕೊಂಡಿದ್ದ ಸ್ವಾಮಿ ಈಶ್ವರಾನಂದರು ತಮ್ಮ 69ನೆಯ ವಯಸ್ಸಿನಲ್ಲಿ 1928ರ ಜನವರಿ 30ರಂದು ಭಗವನ್ನಾಮ ಸ್ಮರಣೆಯೊಂದಿಗೆ ಕೊನೆಯುಸಿರೆಳೆದರು.

ರಂಗರಾವ್ ಅವರು ನಿಧನ ಹೊಂದಿದ ಸಂದರ್ಭದಲ್ಲಿ ಅವರ ಸಾರಸ್ವತ ಸಮುದಾಯಕ್ಕೆ ಸೇರಿದ ಮೇಲು ಜಾತಿಯ ಜನ ಅವರ ಅಂತ್ಯ ಸಂಸ್ಕಾರಕ್ಕೆ ಮುಂದಾದರು. ರಂಗರಾವ್ ಅವರು ಬರೆದಿಟ್ಟ ಉಯಿಲನ್ನು ಅವರ ಹಿರಿಯ ಅಳಿಯ ಸುಬ್ರಾಯನ್ ಅವರು ಅಲ್ಲಿ ಸೇರಿದ ಜನಸಮುದಾಯಕ್ಕೆ ಬಹಿರಂಗ ಪಡಿಸಿದರು. ರಂಗರಾವ್ ಅವರು ದಲಿತ ಸಮುದಾಯದಲ್ಲಿ ಅತಿ ಹಿಂದುಳಿದಿದ್ದ ತೋಟಿ ಪಂಗಡದವರು ತಮ್ಮ ಪಾರ್ಥಿವ ಶರೀರವನ್ನು ಸ್ಮಶಾನಕ್ಕೆ ಒಯ್ಯಬೇಕು

ಎಂಬುದನ್ನು ತಮ್ಮ ಉಯಿಲಿನಲ್ಲಿ ಬರೆದಿದ್ದರು. "ಈ ಪಂಗಡದವರಿಗೆ ಜೀವಿತ ಕಾಲದಲ್ಲಿ ಹೆಚ್ಚಿನ ಸೇವೆ ಮಾಡಲು ಸಾಧ್ಯವಾಗಲಿಲ್ಲ. ಕೊನೆಗೆ ಅವರ ಸ್ಪರ್ಶದಿಂದಲಾದರೂ ನಮ್ಮ ಆತ್ಮಕ್ಕೆ ಚಿರಶಾಂತಿ ಲಭಿಸೀತು". ಎಂಬ ಹಿರಿಯಾಸೆಯನ್ನು ಅವರು ತಮ್ಮ ಉಯಿಲಿನಲ್ಲಿ ವ್ಯಕ್ತಪಡಿಸಿದ್ದರು. ಇದನ್ನು ಜನತೆಯ ಮುಂದೆ ಪ್ರಕಟಿಸಿದ ಸುಬ್ರಾಯನ್ ಅವರು ಮೃತರ ಕೊನೆಯ ಆಸೆಯನ್ನು ನೆರವೇರಿಸುವುದು ಉಳಿದವರ ಕರ್ತವ್ಯ ಎಂದು ಮನವರಿಕೆ ಮಾಡಿದ ಮೇಲೆ ಸಾರಸ್ವತರು ಹಿಂದೆ ಸರಿದರು. ತೋಟಿಗರು ಅಂದು ಮಧ್ಯಾಹ್ನ ಮೂರು ಗಂಟೆಗೆ ರಂಗರಾವ್ ಅವರ ಪಾರ್ಥಿವ ಶರೀರವನ್ನು ರುದ್ರಭೂಮಿಗೆ ಮೆರವಣಿಗೆಯಲ್ಲಿ ಹೊತ್ತೊಯ್ದರು. ಅದರಲ್ಲಿ ಸಮಾಜದ ಎಲ್ಲಾ ವರ್ಗದವರೂ ಪಾಲುಗೊಂಡರು. ಮೌನವಾಗಿ ಸಾಗಿದ ಸ್ಮಶಾನ ಯಾತ್ರೆ ಬ್ರಹ್ಮ ಸಮಾಜದ ಕಛೇರಿ ಎದುರು ಸಾಗಿ ಅಲ್ಲಿಂದ ಅತ್ತಾವರದ ಬಾಬುಗುಡ್ಡೆಯ ಸ್ಮಶಾನದಲ್ಲಿ ಅಂತ್ಯಗೊಂಡಿತು.

"ನನ್ನ ಶಾಲೆಯಲ್ಲಿ ಕಲಿತ ದಲಿತ ಜನಾಂಗದ ಮಕ್ಕಳು ವಿದ್ಯಾವಂತರಾಗಿ, ದೊಡ್ಡವರಾಗಿ ಸರ್ಕಾರಿ ನೌಕರಿಗೆ ಸೇರಿ ನಮ್ಮೂರ ರಸ್ತೆಗಳಲ್ಲಿ ಕಾರಿನಲ್ಲಿ ಓಡಾಡಬೇಕು. ಆಗ ರಸ್ತೆಯಲ್ಲಿ ಏಳುವ ದೂಳು ನನ್ನ ತಲೆಗೆ ತಾಗಬೇಕು. ಆಗ ನನ್ನ ಜನ್ಮ ಸಾರ್ಥಕವಾಗುತ್ತದೆ" ಎಂಬುದು ರಂಗರಾವ್ ಅವರು ದಲಿತರ ಬಗ್ಗೆ ತಾಳಿದ್ದ ಕನಸು. ಅದು ಅವರ ಬದುಕಿದ್ದಾಗ ಸಾಕಾರಗೊಳ್ಳಲಿಲ್ಲ (ಅವರ ಈ ಹೇಳಿಕೆಯನ್ನು ಅವರು ನಿಧನರಾಗಿ 73ವರ್ಷಗಳ ತರುವಾಯ ಅವರ ಸಮಾಧಿಯ ಮೇಲೆ ಬರೆಯಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ದಲಿತ ನೌಕರರ ಹಿತರಕ್ಷಣಾ ಸಮಿತಿ ಅಂದಿನ ಅಧ್ಯಕ್ಷ ಡಾ.। ಮುಗಳವಳ್ಳಿ ಕೇಶವ ಧರಣಿ ಅವರ ನೇತೃತ್ವದಲ್ಲಿ ಕುದ್ಮುಲ್ ರಂಗರಾವ್ ಅವರ ಸಮಾಧಿ ಸ್ಥಳವನ್ನು ರಾಜಘಾಟ್ ಮಾದರಿಯಲ್ಲಿ ಪವಿತ್ರ ಭೂಮಿಯನ್ನಾಗಿ ಅಭಿವೃದ್ಧಿ ಪಡಿಸಲು ಮುಂದೆ ಬಂದಿದ್ದು. ಅದರೊಂದಿಗೆ ಮಂಗಳೂರು ಮಹಾನಗರ ಪಾಲಿಕೆಯೂ ಕೈಜೋಡಿಸಿ ಸಮಾಧಿ ಸುತ್ತ ಸ್ಮಾರಕ ಗೋಪುರವೊಂದನ್ನು ನಿರ್ಮಿಸಿದೆ. ಇದನ್ನು ಬಾಬಾ ಸಾಹೇಬ್ ಅಂಬೇಡ್ಕರ್ ಅವರ 110ನೇ ಜನ್ಮದಿವಾದ 2001ನೇ ಎಪ್ರಿಲ್ 14ರಂದು ಅದನ್ನು ಸಮಾಜಕ್ಕೆ ಸಮರ್ಪಿಸಲಾಯಿತು).



**ಬಾಬುಗುಡ್ಡದಲ್ಲಿರುವ ಕುದ್ಮುಲ್ ರಂಗರಾಯರ ಸಮಾಧಿ ಸ್ಥಳ**

## • ಗಾಂಧೀಜಿ ಮಂಗಳೂರು ಭೇಟಿ

ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಜನತೆಯನ್ನು ಜಾಗೃತಗೊಳಿಸಲು ನಿರತರಾಗಿದ್ದ ಗಾಂಧೀಜಿ 1920ರ ಆಗಸ್ಟ್ 19ರಂದು ಮೊಟ್ಟಮೊದಲ ಬಾರಿಗೆ ಮಂಗಳೂರಿಗೆ ಭೇಟಿ ನೀಡಿದರು.[4] ಶೌಕತ್ ಆಲಿ ಅವರೊಡನೆ ಬಂದಿದ್ದ ಗಾಂಧೀಜಿ ಸಾರ್ವಜನಿಕ ಸಭೆ ಮತ್ತು ಮಹಿಳೆಯರ ಸಭೆಗಳಲ್ಲಿ ಭಾಗವಹಿಸಿದರು. ಕಾರ್ನಾಡ್ ಸದಾಶಿವರಾಯರು ತಮ್ಮ ಮನೆಯ ಮಹಿಳೆಯರ ಯಾವತ್ತು ಒಡವೆಗಳನ್ನು ಗಾಂಧೀಜಿ ಅವರಿಗೆ ಸಲ್ಲಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ಸಮರ್ಪಿಸಿಕೊಂಡಿದ್ದ ಮಹತ್ವದ ಗಳಿಗೆ ಅದು. ಅಂದಿನ ಸಭೆಯಲ್ಲಿ ತಮ್ಮ ಅಸಹಕಾರ ಚಳವಳಿಯ ಪರಿಕಲ್ಪನೆಯನ್ನು ಗಾಂಧೀಜಿ ವಿವರಿಸಿದರು. ಮಹಿಳೆಯರ ಸಭೆಯಲ್ಲಿ ರಾಷ್ಟ್ರೀಯ ರಕ್ಷಣಾ ನಿಧಿಗಾಗಿ ತಮ್ಮೆಲ್ಲ ಆಭರಣಗಳನ್ನು ಕಿತ್ತು ಗಾಂಧೀಜಿಗೆ ಕೊಟ್ಟ ಪ್ರಸಂಗ ಅಪೂರ್ವವಾಗಿ, ಈ ಬಗ್ಗೆ ಗಾಂಧೀಜಿ

ಅವರು ಅಚ್ಚರಿಪಟ್ಟರು. ಈ ಸಂದರ್ಭದಲ್ಲಿ ಅವರಿಗೆ ರಂಗರಾವ್ ಅವರ ಚಟುವಟಿಕೆಗಳನ್ನು ಯಾರೂ ತಿಳಿಸಲಿಲ್ಲ. 1927ರ ಅಕ್ಟೋಬರ್ 27ರಿಂದ 31ರವರೆಗೆ ಖಾದಿ ಪ್ರಚಾರಕ್ಕಾಗಿ ಜಿಲ್ಲೆಗೆ ಆಗಮಿಸಿದ್ದ ಗಾಂಧೀಜಿ ನೀಲೇಶ್ವರ, ಕಾಸರಗೋಡು, ಬಂಟ್ವಾಳ, ಕುಂದಾಪುರ, ಕಾರ್ಕಳ, ಉಡುಪಿಗಳಲ್ಲಿ ಸಾರ್ವಜನಿಕ ಸಭೆ ನಡೆಸಿದರು. ಆಗಲೂ ಅವರಿಗೆ ರಂಗರಾವ್ ಅವರ ಚಟುವಟಿಕೆಗಳ ವಿವರಗಳನ್ನು ತಿಳಿಸಲಿಲ್ಲ.

ಮುಂದೆ 1934ರಲ್ಲಿ ಅವರು ಹರಿಜನರ ಸಮಸ್ಯೆಯ ಪ್ರಚಾರಕ್ಕೆ ಕೈಗೊಂಡ ಪ್ರವಾಸ ಕಾಲದಲ್ಲಿ ರಂಗರಾವ್ ಅವರು ಕೈಗೊಂಡಿದ್ದ ದಲಿತೋದ್ಧಾರಕ ಚಟುವಟಿಕೆಗಳನ್ನು ಪರಿಚಯಿಸಲಾಯಿತು. ಆ ವೇಳೆಗೆ ರಂಗರಾವ್ ಅವರು ವಿಧಿವಶರಾಗಿ ಆರು ವರ್ಷಗಳು ಕಳೆದಿದ್ದವು.

1934ರ ಫೆಬ್ರವರಿ 24ರಂದು ಸಂಜೆ 5 ಗಂಟೆಗೆ ಗಾಂಧೀಜಿ ತಮ್ಮ ಅನುಯಾಯಿಗಳೊಂದಿಗೆ ಮಂಗಳೂರಿಗೆ ಆಗಮಿಸಿದರು. ಠಕ್ಕರ್ ಬಾಪಾ ಅವರೂ ಗಾಂಧೀಜಿ ಜೊತೆ ಇದ್ದರು. ಅವರು ಮಡಿಕೇರಿಯಿಂದ ಹೊರಟು ಸಂಪಾಜೆ, ಸುಳ್ಯ, ಪುತ್ತೂರು, ವಿಟ್ಲ, ಕಬಕ, ಕಲ್ಲಡ್ಕ, ಪಾಣೆ ಮಂಗಳೂರು, ಬಂಟ್ವಾಳ, ಆರ್ಕುಳ, ಅಡ್ಯಾರು, ಹಳ್ಳಿಗಳ ದಲಿತರ ಕೇರಿಗಳಿಗೆ ಭೇಟಿ ನೀಡಿದ್ದರು. ಅಲ್ಲಿ ನೆರೆದಿದ್ದ ಸಾರ್ವಜನಿಕರಿಗೆ ದಲಿತತೆಯ ನಿವಾರಣೆಗೆ ಶ್ರಮಿಸುವಂತೆ ಕರೆ ನೀಡುತ್ತಿದ್ದರು. ಆ ಕಾರ್ಯಕ್ರಮಗಳಿಗೆ ದೇಣಿಗೆ ನೀಡುವಂತೆ ಮನವಿ ಮಾಡುತ್ತಿದ್ದರು. ಆ ವೇಳೆಗೆ ಅವರು ಪ್ರಚಂಡ ಶಕ್ತಿಯಾಗಿ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಕ ಶಕ್ತಿಯಾಗಿದ್ದರು. ಜನರೂ ಮುಗಿಬಿದ್ದು ದೇಣಿಗೆ ನೀಡುತ್ತಿದ್ದರು. ಅವರ ಸಭೆಗೆ ಹಾಜರಾಗುತ್ತಿದ್ದ ಮಹಿಳೆಯರೂ ಗಾಂಧೀಜಿ ಕೇಳುತ್ತಿದ್ದಂತೆ ತಮ್ಮ ಆಭರಣಗಳನ್ನು ಬಿಚ್ಚಿ ಕೊಡುತ್ತಿದ್ದರು.

ಗಾಂಧೀಜಿ ಆಗಮನದ ಸುದ್ಧಿ ಮಂಗಳೂರಿನ ದಲಿತ ಸಮುದಾಯದಲ್ಲಿಯೂ ಸಂಚಲನ ಮೂಡಿಸಿತ್ತು. ದೇವರಿಗೆ ಪ್ರಿಯರಾಗಿದ್ದವರೆಂದು ಅವರನ್ನು ಹರಿಜನರು ಎಂದು ಕರೆದವರು ಗಾಂಧೀಜಿ. ಗಾಂಧೀಜಿ ತಮ್ಮ ಪ್ರವಾಸದ ವೇಳೆ ಹರಿಜನರ ಕೇರಿಗೆ ಮೊದಲು ಭೇಟಿ ನೀಡುತ್ತಾ ಇದ್ದುದರಿಂದ ಅವರೆಲ್ಲ ತಮ್ಮ ಗುಡಿಸಲುಗಳನ್ನು ತಳಿರುಗೋರಣಗಳಿಂದ ಸಿಂಗರಿಸಿ ಮನೆ ಎದುರು

ಸಾರಿಸಿ ರಂಗವಲ್ಲಿ ಇಟ್ಟು ಮಹಾತ್ಮನನ್ನು ಎದುರುಗೊಳ್ಳಲು ಸಜ್ಜಾಗಿದ್ದರು. ಅವರು ಮಂಗಳೂರಿನ ಕಾರ್ಯಕ್ರಮದ ವಿವರ ತಿಳಿದ ನೂರಾರು ದಲಿತರು ಜಿಲ್ಲೆಯ ಹಳ್ಳಿಗಳಿಂದಲೂ ನೂರಾರು ಸಂಖ್ಯೆಯಲ್ಲಿ ಆಗಮಿಸಿ ರಸ್ತೆಯ ಎರಡೂ ಕಡೆ ನೆರೆದಿದ್ದರು. ಅಂದು ರಾತ್ರಿ ಏಳು ಗಂಟೆ ಸುಮಾರಿಗೆ ಶೇಡಿಗುಡ್ಡೆ ಡಿಸಿಎಂ ಕಛೇರಿಗೆ ಗಾಂಧೀಜಿ ಬಂದರು. ಅಲ್ಲಿನ ಪ್ರಾರ್ಥನಾ ಮಂದಿರದಲ್ಲಿ ಅವರು ದಲಿತ ಮಕ್ಕಳನ್ನು ಭೇಟಿ ಮಾಡುವ ಕಾರ್ಯಕ್ರಮವಿತ್ತು. ಗಾಂಧೀಜಿಯವರನ್ನು ನೋಡುವುದಕ್ಕೆ ಸಾರ್ವಜನಿಕ ನೂಕು ನುಗ್ಗಲು ಜನರ ದಟ್ಟಣೆ ಮತ್ತು ಒತ್ತಡದಿಂದ ಡಿಸಿಎಂ ಕಛೇರಿಯ ಮುಂಭಾಗಕ್ಕೆ ಸ್ವಲ್ಪ ಧಕ್ಕೆಯೂ ಆಯಿತು. ಗಾಂಧೀಜಿ ಅಲ್ಲಿನ 'ವಿದ್ಯಾನಿಲಯ'ಕ್ಕೆ ಭೇಟಿ ನೀಡಿ ದಲಿತ ಮಕ್ಕಳು ಸ್ವತಃ ಮಾಡಿದ ಕರಕುಶಲ ವಸ್ತುಗಳನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸಿದರು. ತಮ್ಮ ನಿಲಯಕ್ಕೆ ಆಗಮಿಸಿದ ಮಹತ್ಮಾರಿಗೆ ಮಕ್ಕಳು ಸ್ವಾಗತ ಗೀತೆಯನ್ನು ಸುಶ್ರಾವ್ಯವಾಗಿ ಹಾಡಿದರು. ಮಕ್ಕಳು ಪಡೆದಿದ್ದ ತರಬೇತಿ, ಹಾಡುಗಾರಿಕೆಯಲ್ಲಿನ ಅಚ್ಚುಕಟ್ಟುತನವನ್ನು ಕಂಡು ಗಾಂಧೀಜಿ ಸಂತೋಷಪಟ್ಟರು.

ಕುದ್ಮುಲ್ ರಂಗರಾವ್‌ರು ಕೈಗೊಂಡಿದ್ದ ದಲಿತರ ಉದ್ಧಾರದ ಕೆಲಸಗಳ ಮಾಹಿತಿಗಳನ್ನೆಲ್ಲ ಪಡೆದರು. ಅಂದು ರಾತ್ರಿ ಅಲ್ಲಿ ನಡೆದ ಬೃಹತ್ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ 'ಪೂಜ್ಯ ರಂಗರಾವ್'. ಅವರಿಂದ ಸಾರ್ವಜನಿಕ ಸೇವಾ ನಿಷ್ಠೆಯನ್ನು ಮನಗಾಣಿಸಿಕೊಂಡೆ. ಅವರು ನಮಗೆ ಒಂದು ಉತ್ತಮ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ದಲಿತ ಜನಾಂಗದ ಪುನರುದ್ಧಾರ ಕಾರ್ಯದಲ್ಲಿ ಮುನ್ನಡೆದ ರಂಗರಾವ್ ನನಗೆ ಸ್ಫೂರ್ತಿ, ಮಾರ್ಗದರ್ಶಕರು, ಅಸ್ಪೃಶ್ಯತಾ ನಿವಾರಣಾ ಕಾರ್ಯದಲ್ಲಿ ಕುದ್ಮುಲ್ ರಂಗರಾವ್‌ರು ನಿಜವಾಗಿಯೂ ನನಗೆ ಗುರುಗಳು' ಎಂದು ಘೋಷಿಸಿದರು.

ಜೊತೆಗೆ ಅಲ್ಲಿನ ದಲಿತ ಮಕ್ಕಳ ಶಿಕ್ಷಣ ಪಡೆದು ಸ್ವಂತ ಆಸ್ತಿ ಗಳಿಸಿ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನ ಗಳಿಸುವಂತೆ ಕಿವಿಮಾತು ಹೇಳಿದರು. ರಂಗರಾವ್ ಅವರು ಕೈಗೊಂಡಿದ್ದ ದಲಿತರ ಸಾಮಾಜಿಕ, ಆರ್ಥಿಕ ಏಳಿಗೆಯ ಕೆಲಸಗಳನ್ನು ಮುಕ್ತವಾಗಿ ಪ್ರಶಂಶಿಸಿದರು. ಆ ಸಭೆಯನ್ನು ರಂಗರಾವ್ ಅವರ ಆರನೇ ಪುಣ್ಯತಿಥಿಯ ಅಂಗವಾಗಿ ಏರ್ಪಡಿಸಿದ್ದು, ಶಾಲಾ ಮಕ್ಕಳಿಗೆ ಸಿಹಿ ಹಾಗೂ ಬಟ್ಟೆಗಳನ್ನು ಗಾಂಧೀಜಿ ಅವರು ನೀಡಿ ಆಶೀರ್ವದಿಸಿದರೆಂದು ದಾಖಲೆಗಳಲ್ಲಿದೆ.

ರಂಗರಾವ್ ಅವರು ಅಸ್ಪೃಶ್ಯತೆಯ ನಿವಾರಣೆಗಾಗಿ ಹಲವು ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಅನುಷ್ಠಾನ ಗೊಳಸುತ್ತಿದ್ದ ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ಮೂರು ದಶಕಗಳಲ್ಲಿ ಅವುಗಳಿಗೆ ವ್ಯಾಪಕ ಪ್ರಚಾರ ಕೊಡುವ ಪತ್ರಿಕೆಗಳೂ ಇರಲಿಲ್ಲ. 1886ರಲ್ಲಿ ಉಡುಪಿಯ ಹಿಂದೂ ಪ್ರೆಸ್‌ನಿಂದ ಪ್ರಕಟವಾಗುತ್ತಿದ್ದ "ಸುದರ್ಶನ" ಎಂಬ ಪತ್ರಿಕೆಗೆ ಕುಂಬಳೆ ಕೃಷ್ಣರಾಯ ಎಂಬುವರು ಸಂಪಾದಕರಾಗಿದ್ದರು. ಆಗ ಪ್ರಕಟವಾಗಿದ್ದ ಪತ್ರಿಕೆಗಳಿಗೆ ಶೈಕ್ಷಣಿಕ ಉದ್ದೇಶಗಳೇ ಮುಖ್ಯವಾಗಿದ್ದವು. ಆ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 1885ರಲ್ಲಿ ಅನಂತರಾವ್ ಎಂಬುವರು ಪ್ರಕಟಿಸಿದ್ದ "ಕನ್ನಡಕೇಸರಿ", 1907ರಲ್ಲಿ ಎ.ಎಸ್. ಕಾಮತ್ ನೇತೃತ್ವದಲ್ಲಿ ಆರಂಭವಾದ "ಸ್ವದೇಶಾಭಿಮಾನಿ", 1915ರಲ್ಲಿ ಎಂ.ಎನ್. ಕಾಮತರಿಂದ ಆರಂಭವಾದ "ಬೋಧಿನಿ" (ಮಾಸಪತ್ರಿಕೆ), 1915ರಲ್ಲಿ ಮುಳಿಯ ತಿಮ್ಮಪ್ಪಯ್ಯ ಅವರು ಆರಂಭಿಸಿದ "ಕನ್ನಡ ಕೋಗಿಲೆ", ಅದೇ ವರ್ಷ ಡಿ.ಕೆ. ಭಾರದ್ವಾಜರು ಹೊರಡಿಸಿದ "ತಿಲಕ ಸಂದೇಶ" ಮತ್ತು ಮೊಳಹಳ್ಳಿ ಶಿವರಾಯರು ಆರಂಭಿಸಿದ "ಸಹಕಾರಿ", 1921ರಲ್ಲಿ ಪ್ರಕಟಣೆ ಆರಂಭಿಸಿದ ಕೆ. ಹೊನ್ನಪ್ಪ ಶೆಟ್ಟಿ ಸಂಪಾದನೆಯ "ನವಯುಗ" 1923ರಲ್ಲಿ ಶಿವರಾಮ ಕಾರಂತರು ಆರಂಭಿಸಿದ "ವಸಂತ" ಮಾಸಪತ್ರಿಕೆ ಪ್ರಸಾರದಲ್ಲಿದ್ದವು. ಈ ಎಲ್ಲ ಪತ್ರಿಕೆಗಳಿಗೆ ಅವುಗಳ ಸಂಪಾದಕರ ಮರ್ಜಿಗೆ ಅನುಗುಣವಾಗಿ ಶೈಕ್ಷಣಿಕ ಹಾಗೂ ಮನರಂಜನೆಯ ಉದ್ದೇಶಗಳಿದ್ದು ನಿರ್ದಿಷ್ಟ ಉದ್ದೇಶಕ್ಕಾಗಿ ಆರಂಭವಾಗಿದ್ದವು. ಅವುಗಳ ಪ್ರಸಾರ ಸೀಮಿತವಾಗಿತ್ತು. ಆದರೂ ರಂಗರಾವ್ ಅವರು ದಲಿತರ ಏಳಿಗೆಗಾಗಿ ಕೈಗೊಂಡ ಸಮಾಜ ಸುಧಾರಣಾ ಚಟುವಟಿಕೆಗಳು ಅಂದಿನ ದಿನಗಳಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರ ಪಡೆದವು. ದೇಶವಿದೇಶಗಳಲ್ಲಿಯೂ ಅವರ ಸೇವಾ ಕಾರ್ಯದ ವಿವರಗಳು ಹರಡಿದವು. ವಿದೇಶಗಳಿಂದ ಅನೇಕ ಗಣ್ಯರು ರಂಗರಾವ್ ಅವರಿಗೆ ಪತ್ರ ಬರೆದು ಅವರ ಸೇವಾಕಾರ್ಯವನ್ನು ಪ್ರಶಂಸಿಸಿದರು. ವಿದೇಶಿಯರು ಅವರ ಬಗ್ಗೆ ಗೌರವ ತಾಳಿದರು. ಅನೇಕ ಗಣ್ಯರು ಮಂಗಳೂರಿನ ಡಿಸಿಎಂ. ಕಛೇರಿಗೆ ಹಣ ಕಳುಹಿಸುತ್ತಿದ್ದರು. ಅಲ್ಲಿನ ಗ್ರಂಥಾಲಯಕ್ಕೆ ಪುಸ್ತಕಗಳನ್ನು ಕಳುಹಿಸಿದ್ದರು. ರಂಗರಾವ್ ಅವರು

ಅಲ್ಲಿ ಪ್ರಾರಂಭಿಸಿದ ಗ್ರಂಥಾಲಯದಲ್ಲಿ ಉನ್ನತ ಜೀವನಮೌಲ್ಯಗಳನ್ನು ಪ್ರತಿಪಾದಿಸುವ ಮೌಲಿಕ ಗ್ರಂಥಗಳಿದ್ದವು. ಅವರ ಸೇವಾ ಕಾರ್ಯಕ್ಕೆ ವಿದೇಶಗಳಲ್ಲಿ ಎಂಥ ಮಾನ್ಯತೆ ಇತ್ತೆಂದರೆ ಅಮೇರಿಕ ಉದ್ಯಮಿ ಹೆನ್ರಿ ಫೋರ್ಡ್ ಮಂಗಳೂರಿನ ಡಿಸಿಎಂ ಕಛೇರಿಗೆ ಹಣ ಕಳುಹಿಸುತ್ತಿದ್ದರು.

ಈ ವರ್ಷಗಳಲ್ಲಿ ಮಂಗಳೂರಿಗೆ ಭೇಟಿ ನೀಡುತ್ತಿದ್ದ ದೇಶೀಯ ಹಾಗೂ ವಿದೇಶಿ ಗಣ್ಯರು ಶೇಡಿಗುಡ್ಡೆಯ ಡಿಸಿಎಂ ಕಛೇರಿಗೆ ಭೇಟಿ ಕೊಡುತ್ತಿದ್ದರು. ರಾಷ್ಟ್ರೀಯ ಮುಖಂಡರಲ್ಲಿ ಕವಿ ರವೀಂದ್ರನಾಥ ಟಾಗೋರ್ (1922ರಲ್ಲಿ), ದೀನಬಂಧು ಸಿ.ಎಫ್ ಆಂಡ್ರ್ಯೂಸ್, ಡಾ. ಅನಿ ಬೆಸೆಂಟ್ ಅವರೆಲ್ಲ ಡಿಸಿಎಂ ಕಛೇರಿ ಭೇಟಿ ನೀಡಿ ರಂಗರಾವ್ ಅವರ ಸೇವಾಕಾರ್ಯವನ್ನು ಶ್ಲಾಘಿಸಿದ್ದರು. ಅವರು ನಿಧನರಾದ ಹತ್ತು ವರ್ಷಗಳ ನಂತರ ಮಂಗಳೂರಿಗೆ ಭೇಟಿ ನೀಡಿದ್ದ ವಿದೇಶಿ ಉದ್ಯಮಿ ಜಸ್ಟಿಸ್ ವಿಲ್‌ಬರ್ಟ್ ಅವರು ಡಿಸಿಎಂ ಕಛೇರಿಗೆ ಹತ್ತು ಸಾವಿರ ರೂಪಾಯಿಗಳ ದೇಣಿಗೆ ನೀಡಿದರು.

1914ರಲ್ಲಿಯೇ ಭಾರತ ಸೇವಕ ಸಂಘವನ್ನು (ಸರ್ವೆಂಟ್ಸ್ ಆಫ್ ಇಂಡಿಯಾ) ಸ್ಥಾಪಿಸಿದ ಗೋಪಾಲಕೃಷ್ಣ ಗೋಖಲೆ, ಗುಜರಾತಿನ ಆದಿವಾಸಿಗಳು ಮತ್ತು ಗಿರಿಜನ ಉದ್ಧಾರಕ್ಕಾಗಿ ಶ್ರಮಿಸುತ್ತಿದ್ದ ಸಮಾಜ ಸುಧಾರಕ ಠಕ್ಕರ್ ಬಾಪ (ಅಮೃತಲಾಲ್ ವಿಠಲದಾಸ್ ಠಕ್ಕರ್). ಜಿ.ಕೆ. ದೇವಧರ್, ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ ಅವರೆಲ್ಲ ಡಿಸಿಎಂ ಸಂಸ್ಥೆಗೆ ಭೇಟಿ ನೀಡಿದವರು. ಬ್ರಹ್ಮಸಮಾಜದ ಡಾ. ಕಾರ್ನಾಡರು ರಂಗರಾವ್ ಅವರು ಬದುಕಿದ್ದಾಗ ಡಿಸಿಎಂ ಸಂಸ್ಥೆಗೆ ಒಮ್ಮೆಗೆ ಹತ್ತು ಸಾವಿರ ರೂಪಾಯಿಗಳನ್ನು ನೀಡಿದರು. ಅದರಿಂದ ರಂಗರಾವ್ ಅವರು ಅನಾಥಾಶ್ರಮವನ್ನು ಶೇಡಿಗುಡ್ಡೆಯಲ್ಲಿ ಕಟ್ಟಿಸಿ ಅದಕ್ಕೆ ಡಾ. ಕಾರ್ನಾಡರ ಅನಾಥಶ್ರಮ ಮತ್ತು ವಸತಿ ನಿಲಯ' ಎಂಬ ಹೆಸರನ್ನಿಟ್ಟರು.

ಮುಂಬೈನಲ್ಲಿ ನೆಲೆಸಿದ್ದ ಹಟ್ಟಿಯಂಗಡಿ ನಾರಾಯಣರಾಯರು 1917ರಲ್ಲಿ ಎರಡು ಭಾಗಗಳಲ್ಲಿ ಪ್ರಕಟಿಸಿದ "ಕೊಂಕಣಿ ಚೊ ಮೂಲಾದರ್ಶು" ಕೃತಿಯ ಮಾರಾಟದಿಂದ ಬರುವ ಹಣವನ್ನು (ಪತ್ರಿಕೆ ಮೂರಾಣೆ) ಮಂಗಳೂರಿನ ನಿರಾಶ್ರಿತ ಜನ ಸಹಾಯಕ ಸಂಘಕ್ಕೆ ಕೊಡಬೇಕೆಂದು ಉಯಿಲು ಬರೆದಿದ್ದರು. ಹಟ್ಟಿಯಂಗಡಿ ನಾರಾಯಣರಾಯರು 1921ರ ಜೂನ್ 17ರಂದು ತೀರಿಕೊಂಡರು. ಅವರ ಮರಣಾನಂತರ ನಾರಾಯಣರಾಯರ ಪತ್ನಿ ಅಂಬಾಬಾಯಿ ಅವರು ಹತ್ತು ಸಾವಿರ

ರೂಪಾಯಿಗಳನ್ನು ಮಂಗಳೂರಿನ ಬಡ ಸಾರಸ್ವತ ವಿದ್ಯಾರ್ಥಿಗಳ ಫಂಡು, ಕುದ್ಮುಲ್ ರಂಗರಾವ್ ಅವರು ಸ್ಥಾಪಿಸಿದ ಡಿಸಿಎಂ ಸಂಸ್ಥೆ ಹಾಗೂ ಪುಣೆಯ ಇರಾವತಿ ಕರ್ವೆ ಇವರು ಸ್ಥಾಪಿಸಿದ್ದ ಮಹಿಳಾ ವಿದ್ಯಾಲಯ ಮತ್ತು ಮುಂಬೈನ ಸೇವಾಸದನಕ್ಕೆ ಸಮನಾಗಿ ಹಂಚಿದರು ಎಂಬುದನ್ನು ಸಂಶೋಧಕ ಶ್ರೀನಿವಾಸ ಹಾವನೂರರು ಹಟ್ಟಿಯಂಗಡಿ ನಾರಾಯಣರಾಯರ ದಾಖಲೆಗಳನ್ನು ಆಧರಿಸಿ ಬರೆದಿದ್ದಾರೆ.

ಡಿಸಿಎಂ. ಸಂಸ್ಥೆಯ ಎಲ್ಲಾ ಚಟುವಟಿಕೆಗಳನ್ನು ನೋಡಿಕೊಳ್ಳಲು ರಂಗರಾವ್ ಅವರು ಭಾರತ ಸೇವಕ ಸಂಘಕ್ಕೆ ವಹಿಸಿಕೊಟ್ಟ ಅನೇಕ ದಶಕಗಳ ನಂತರ 1953ರಲ್ಲಿ ಆ ಎಲ್ಲ ಶಾಲೆ, ಆಶ್ರಮ, ವಸತಿ ನಿಲಯ ಹಾಗೂ ಸಮುದಾಯ ಭವನಗಳನ್ನೂ ರಂಗರಾವ್ ಅವರು ತಮ್ಮ ಚಟುವಟಿಕೆಗಳಗಾಗಿ ಕಟ್ಟಿದ್ದ ಆಸ್ತಿಗಳನ್ನೂ ಮದ್ರಾಸ್ ಸರ್ಕಾರಕ್ಕೆ ಒಪ್ಪಿಸಲಾಯಿತು.

(ಆಗ ಸ್ವಾತಂತ್ರ್ಯ ಲಭಿಸಿತ್ತು ಕರ್ನಾಟಕ ಏಕೀಕರಣ ಆಗಿರಲಿಲ್ಲ. ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸ್ ರಾಜ್ಯಕ್ಕೆ ಸೇರಿತ್ತು. 1956ರಲ್ಲಿ ಕರ್ನಾಟಕ ಏಕೀರಕರಣವಾದಾಗ ದಕ್ಷಿಣ ಕನ್ನಡ ಜಿಲ್ಲೆ ಅಂದಿನ ವಿಶಾಲ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು).

- **ಶೂದ್ರರ ಏಳಿಗೆಯಲ್ಲಿ ಜ್ಯೋತಿ ಬಾ ಫುಲೆ ಪಾತ್ರ**

ಜ್ಯೋತಿ ಬಾ ಫುಲೆಯವರನ್ನು ಶೂದ್ರ, ಅತಿಶೂದ್ರ ಹಾಗೂ ಸ್ತ್ರೀ ಪರವಾದ ಮೊದಲ ಪೀಳಿಗೆಯ ಪ್ರಮುಖ ಹೋರಾಟಗಾರರೆಂದು ವಿದ್ವಾಂಸರು ಗುರುತಿಸಿದ್ದಾರೆ.[5] ಇವರ ಚಟುವಟಿಕೆಗಳು ಮುಖ್ಯವಾಗಿ ಬ್ರಾಹ್ಮಣ್ಯದ ಖಂಡನೆ, ಆರ್ಯೇತರ ಚಿಂತನೆಯ ಕೃತಿಗಳ ರಚನೆ ಮತ್ತು ಪ್ರಚಾರ, ಸತ್ಯಶೋಧಕ ಸಮಾಜದ ಸ್ಥಾಪನೆ ಮತ್ತು ಸಮಾಜ ಸುಧಾರಣೆ, ಪಾಠಶಾಲೆಗಳ ನಿರ್ಮಾಣ, ಸ್ತ್ರೀ ವಿಮೋಚನೆ ಈ ಮುಂತಾದ ವಿಷಯಗಳಿಗೆ ವಿಸ್ತರಿಸಿಕೊಂಡಿದೆ.

ಜ್ಯೋತಿ ಬಾ ಫುಲೆಯವರು "ಮಾಲಿ" (ಹೂವಾಡಿಗ) ಎನ್ನುವ ಶೂದ್ರ ಸಮುದಾಯದಲ್ಲಿ ಹುಟ್ಟಿದವರಾಗಿದ್ದು ಜಾತಿ ತಾರತಮ್ಯ ಅಸ್ಪೃಶ್ಯತೆ ಶೋಷಣೆಗಳನ್ನು ಕಂಡವರು. ಬಾಲ್ಯದಲ್ಲಿ

ಕ್ರಿಶ್ಚಿಯನ್ ಮಿಶನರಿ ಶಾಲೆಯಲ್ಲಿ ಶಿಕ್ಷಣ ಪಡೆದವರಾಗಿದ್ದು, ಪಾದ್ರಿಗಳ ಧರ್ಮ, ಸಮಾಜ ಸೇವೆಯ ವಿಧಾನಗಳಿಂದ ಹಾಗೂ ಥಾಮಸ್ ಪೇನ್ ಎನ್ನುವ ಅಮೇರಿಕಾದ ದೈವಿಕ ಚಿಂತಕನಿಂದ ಪ್ರಭಾವಿತರಾದವರು.

ಫುಲೆಯವರ ಚಿಂತನೆ 19ನೇ ಶತಮಾನದ ಉತ್ತರಾರ್ಧದ ಸಂದರ್ಭದಲ್ಲಿ ಮಹಾರಾಷ್ಟ್ರದ ರಾಜಕೀಯ – ಸಾಂಸ್ಕೃತಿಕ ಸನ್ನಿವೇಶದಲ್ಲಿ ರೂಪುಗೊಂಡಿತು. ಇಂದು ಪೇಶ್ವೆ ಶಾಹಿ ಆಳ್ವಕೆ ಕೊನೆಗೊಂಡು ವಸಾಹತು ಆಳ್ವಕೆಯ ಆರಂಭದ ಕಾಲ ಆಗಿತ್ತು.

ಜ್ಯೋತಿ ಬಾ ಫುಲೆಯವರು ತಮ್ಮ ಚಿಂತನೆಗಳ ಮೂಲಕ ಕುಣಬಿ, ಮಾಲಿ, ದನಗಾರ, ಕುರುಬ ಮುಂತಾದ ರೈತ ಸಮುದಾಯಗಳನ್ನು ಹಾಗೂ ಮಹಾರ, ಮಂಗ, ಮುಂತಾದ ಅಸ್ಪೃಶ್ಯ ಸಮುದಾಯಗಳನ್ನು ಜಾಗೃತರಾಗುವಂತೆ ಮತ್ತು ಸಂಘಟಿತರಾಗುವಂತೆ ಮಾಡಿದ್ದಾರೆ. 1873ರಲ್ಲಿ ಸ್ಥಾಪಿಸಿದ 'ಸತ್ಯಶೋಧಕ ಸಮಾಜ'ದ ಮೂಲಕ ಶೂದ್ರ-ಅತಿಶೂದ್ರ, ಸ್ತ್ರೀಯರ ಉದ್ಧಾರದ ಕೆಲಸಗಳನ್ನು ಕೈಗೊಳ್ಳುತ್ತಾರೆ.

ಈ ಸತ್ಯಶೋಧಕ ಸಮಾಜವು ಬ್ರಾಹ್ಮಣ ಅಸತ್ಯಗಳನ್ನು ಖಂಡಿಸಿತು. ಅಂತರ್‌ಜಾತಿ ಹಾಗೂ ಪೌರೋಹಿತ್ಯ ರಹಿತ ವಿವಾಹಗಳನ್ನು ನಡೆಸಿಕೊಟ್ಟಿತು. ಮೂಢ ಆಚರಣೆಗಳನ್ನು ಖಂಡಿಸುವ ಕೆಲಸಗಳನ್ನು ಮಾಡಿತು. ಪೇಶ್ವೆಗಳು ನಿರ್ಮಿಸಿದ್ದ ಕೆರೆಗಳಿಂದ ನೀರು ತೆಗೆಯಲು ಅಸ್ಪೃಶ್ಯರಿಗೆ ನಿಷೇಧ ಇದ್ದುದರಿಂದ ಫುಲೆಯವರು ತಾವೇ ನಿರ್ಮಿಸಿದ ಕೆರೆಗಳಿಂದ ಅಸ್ಪೃಶ್ಯರು ನೀರು ಉಪಯೋಗಿಸುವಂತೆ ಮಾಡಿದರು. ಈ ಬಗೆಯಲ್ಲಿ ಬ್ರಾಹ್ಮಣ ಪ್ರಣೀತ ಶೋಷಣಾತ್ಮಕ ಸಮಾಜದ ವಿರುದ್ಧ ಮಹಾರಾಷ್ಟ್ರದ ರೈತ ಹಾಗೂ ದಲಿತ ವರ್ಗಗಳನ್ನು ಅವರು ಸಂಘಟಿಸುತ್ತಾರೆ.

## • ಆಧುನಿಕ ಸಂಸದೀಯ ಸಮಾಜ ನಿರ್ಮಾಣದ ರಾಷ್ಟ್ರೀಯತೆ

ಅಂಬೇಡ್ಕರ್ ಭಾರತದ ರಾಜಕೀಯ ಜೀವನದಲ್ಲಿ ಕಾಣಿಸಿಕೊಂಡದ್ದು ಜಾಗತಿಕ ಯುದ್ಧದ ನಂತರದಲ್ಲಿ ಮತ್ತು ರಷ್ಯಾ ಕ್ರಾಂತಿಯ ಆಶಯಗಳು ಭಾರತಕ್ಕೂ ಪ್ರವೇಶಿಸಿದ್ದ ಸಂದರ್ಭದಲ್ಲಿ. ಈ ಕಾಲಘಟ್ಟದಲ್ಲಿ ಭಾರತದ ರಾಜಕೀಯ ಚಿಂತನೆಗಳಲ್ಲಿ ಸಮಾಜವಾದದ ಪ್ರಭಾವ ದಟ್ಟವಾಗಿ ಕಾಣಿಸಿಕೊಳ್ಳತೊಡಗಿತ್ತು.

ಅಂಬೇಡ್ಕರ್ ಭಾರತದಲ್ಲಿ ದಲಿತರ ಹೋರಾಟ, ಸಂಘಟನೆಯನ್ನು ರೂಪಿಸಿದಾಗ ಗಾಂಧಿ ಪ್ರಮುಖ ನಾಯಕರಾಗಿ ಕಾಣಿಸಿಕೊಂಡಿದ್ದರು.[6] ಜೊತೆಗೆ, ಭಾರತವು ಸಂಸದೀಯ ಪ್ರಜಾಪ್ರಭುತ್ವದ ಕಡೆಗೆ ಸಾಗಿತ್ತು. ಈ ಸಂದರ್ಭದಲ್ಲಿ ಅಂಬೇಡ್ಕರ್ ಅತ್ಯಂತ ಕೆಳಸ್ತರದ ಅಸ್ಪೃಶ್ಯರ ಪ್ರಶ್ನೆಗಳಿಂದ ಚಳುವಳಿಯನ್ನು ರೂಪಿಸಲು ಪ್ರಯತ್ನಿಸಿದರು.

ಸಮಾಜದಲ್ಲಿರುವ ಕಟ್ಟಕಡೆಯ ಮನುಷ್ಯನಿಗೆ ಸಾಮಾಜಿಕ ನ್ಯಾಯ, ಆರ್ಥಿಕ, ರಾಜಕೀಯ ಸ್ವಾವಲಂಬಿಸಿ, ಹಕ್ಕು ಕಲ್ಪಿಸುವುದು ಅಂಬೇಡ್ಕರ್‌ರ ಆಶ್ರಯವಾಗಿತ್ತು. ಅದಕ್ಕಾಗಿ ಅವರು. ದಲಿತ ಹೋರಾಟ ಮತ್ತು ಸಂಸದೀಯ ಮಾದರಿಯ ಹೋರಾಟವನ್ನು ನಡೆಸಿದರು. ಅವರ ಚಿಂತನೆಗಳು ಮುಖ್ಯವಾಗಿ, ಅವರ ಆರಂಭಿಕ ಹಂತದ ಮಾರ್ಕ್ಸ್‌ವಾದಿ ನೆಲೆಯ ಹೋರಾಟಗಳು, ಗಾಂಧಿ ಜೊತೆಗಿನ ಮುಖಾಮುಖಿಯಲ್ಲಿ ನಡೆಸುವ ದಲಿತ ಚಿಂತನೆ, ಸಂಸದೀಯ, ಅವಕಾಶ ಮತ್ತು ಹಕ್ಕುಗಳ ಪ್ರತಿಪಾದನೆ ಹಾಗೂ ದಲಿತರ ಮೂಲ ನಿವಾಸಿ, ತತ್ವ ಚಿಂತನೆ, ಜೊತೆಗೆ ಬೌದ್ಧ ಧರ್ಮದ ಅರ್ಥೈಸುವಿಕೆ ಈ ಮುಂತಾದ ನೆಲೆಗಳಲ್ಲಿ ನಡೆದಿದೆ.

ಅಂಬೇಡ್ಕರ್ 1924 ಮಹಾರಾಷ್ಟ್ರದಲ್ಲಿ "ಬಹಿಷ್ಕೃತ ಹಿತಕಾರಣಿ" ಸಭಾ ಸ್ಥಾಪಿಸಿದರು. ಅನಂತರ ಮಹಾನ್ ಸತ್ಯಾಗ್ರಹ ನಡೆಸಿದರು. ಇದು ಅಸ್ಪೃಶ್ಯರ ಆರಂಭಿಕ ಹಂತದ ವಿಮೋಚನ ಚಳುವಳಿ.[7] ಈ ಸಂದರ್ಭದಲ್ಲಿ ಮನುಸ್ಮೃತಿಯನ್ನು ಸುಟ್ಟು ಹಾಕಿ ಪ್ರತಿಭಟಿಸಿದರು. ಅವರ ರಾಜಕೀಯ

ಜೀವನದ ಆರಂಭದಲ್ಲಿ ಅಸ್ಪೃಶ್ಯರನ್ನು ದಲಿತ ವರ್ಗವನ್ನು ಕೃಷಿ ಕಾರ್ಮಿಕರನ್ನು ವಿಶೇಷವಾಗಿ ಪ್ರತಿನಿಧಿಸುವ ಯಾವುದೇ ಸಂಘಟನೆ ಇರಲಿಲ್ಲ. ಕಾಂಗ್ರೆಸ್ ಸಮಾಜವಾದಿಗಳು, ಕಮ್ಯುನಿಸ್ಟರು ದುರ್ಬಲ ವರ್ಗಗಳ ಬಗ್ಗೆ ಮಾತನಾಡಿದರೂ, ಜಾತಿ ವಿರೋಧಿ ಹೋರಾಟದಲ್ಲಿ ಹೆಚ್ಚು ಆಸಕ್ತಿ ತಾಳದಿರುವುದು ಅವರಿಗೆ ಕೊರತೆಯಾಗಿ ಕಂಡು ಬಂತು. 1930ರ ದಶಕದಲ್ಲಿ ಬೆಳೆಯತೊಡಗಿದ ಎಡ ಪಂಥೀಯ ಚಳುವಳಿ ಮೂಲತಃ ಎಡ ಪಂಥಿಯವರಾದ ಅಂಬೇಡ್ಕರರನ್ನು ವಿಶಾಲ ರೈತ ಕಾರ್ಮಿಕ ಕ್ಷೇತ್ರಕ್ಕೆ ಆಕರ್ಷಿಸಿತು. ಒಂದು ಹಂತದಲ್ಲಿ ರೈತ ಕಾರ್ಮಿಕ ಸಮಸ್ಯೆಯನ್ನು ದಲಿತರ ಸಮಸ್ಯೆ ಎಂದು ತಿಳಿದುಕೊಂಡ ಅವರು 1936ರಲ್ಲಿ ಸ್ವತಂತ್ರ ಕಾರ್ಮಿಕ ಪಕ್ಷವನ್ನು ಕಟ್ಟಿದರು. ಈ ಪಕ್ಷವು ಕೆಂಪು ಬಾವುಟವನ್ನು ಒಳಗೊಂಡಿತಲ್ಲದೇ, ಜನರನ್ನು ಸಂಘಟಿಸಿ ಮಹಾರಾಷ್ಟ್ರದಲ್ಲಿ ಪ್ರಮುಖ ವಿರೋಧ ಪಕ್ಷವಾಗಿ ಕೂಡಾ ಬೆಳೆಯಿತು. ಈಗಾಗಲೇ ಅಂಬೇಡ್ಕರ್ ಮತಾಂತರದ ವಿಷಯವನ್ನು ಪ್ರಕಟಿಸಿದ್ದರಿಂದ ಪಕ್ಷ ಜನ ಬೆಂಬಲವನ್ನು ಗಳಿಸಿಕೊಂಡಿತು. ಮಾತ್ರವಲ್ಲ, 1930ರ ದಶಕವು ಮಾರ್ಕ್ಸ್‌ವಾದೀ ಸಂಘಟನೆಗಳು ರಾಷ್ಟ್ರೀಯ ಕಾರ್ಮಿಕ, ರೈತ ಹೋರಾಟಗಳನ್ನು ಸಂಘಟಿಸುತ್ತಿದ್ದ ಕಾಲವೂ ಆಗಿತ್ತು.

ಭಾರತದ ರಾಷ್ಟ್ರೀಯತೆಯನ್ನು ಮೇಲ್ವರ್ಗದ ನೆಲೆಗಳಲ್ಲಿ ರೂಪಿಸುವುದು ಉನ್ನತ ವರ್ಗಗಳಿಗೆ ಅಧಿಕಾರ ತಂದುಕೊಡುವ ತಂತ್ರವೆಂದು ಅಂಬೇಡ್ಕರ್ ಗ್ರಹಿಸಿದ್ದರು. ಹಿಂದೂ ರಾಷ್ಟ್ರೀಯತೆ ಮತ್ತು ಮೇಲ್ವರ್ಗದ ರಾಜಕೀಯವನ್ನು ವಿರೋಧಿಸಲು ಅವರು ಬ್ರಾಹ್ಮಣೇತರ ಸಾಮಾಜಿಕ ಆಂದೋಲನಗಳಿಂದ ಹಾಗೂ ಫುಲೆಯವರ ಮೂಲ ನಿವಾಸಿ ಚಿಂತನೆಗಳಿಂದ ಪ್ರೇರಣೆ ಪಡೆದರು. ಅವರು ತಮ್ಮ ಮುಖ್ಯ ಸಿದ್ಧಾಂತಗಳನ್ನು ಹಿಂದೂ ರಾಷ್ಟ್ರೀಯತೆ ಮತ್ತು ಹಿಂದೂ ಧರ್ಮ ವಿರೋಧ, ಜಾತಿ ವಿನಾಶ ಮತ್ತು ಆಧುನಿಕ ರಾಷ್ಟ್ರ ನಿರ್ಮಾಣದ ನೆಲೆಗಳಲ್ಲಿ ರೂಪಿಸುತ್ತಾರೆ.

ವ್ಯಕ್ತಿ ಪರಿಶುದ್ಧತೆ ವ್ಯಕ್ತಿಯ ಧರ್ಮಕ್ಕೆ ಕಾರಣವಾಗುತ್ತದೆ. ಅದೇ ರೀತಿ ವ್ಯಕ್ತಿಯ ಧರ್ಮವೇ ಸಾಮಾಜಿಕವಾದಾಗ ಸಮಾಜ ಧರ್ಮವಾಗುತ್ತದೆ. ಈ ಸಮಾಜ ಧರ್ಮವೇ ರಾಷ್ಟ್ರೀಯವಾದಾಗ ರಾಷ್ಟ್ರ ಧರ್ಮವಾಗುತ್ತದೆ. ಆದ್ದರಿಂದಲೇ ಯಾವುದರಿಂದ ಅಭ್ಯುದಯ ಹಾಗೂ ಶ್ರೇಯಸ್ಸು

ಸಿದ್ಧಿಸುವುದೇ ಅದುವೇ ಧರ್ಮ. ಅಂತಹ ಧರ್ಮವೇ ನಮಗೆ ಬೇಕು. ಇದೇ ಸಮಾಜ ವಿಕಾಸದ ತಳಹದಿಯಾಗಿದೆ. ಹೀಗೆ ಒಂದೇ ಜಾತಿ, ಒಂದೇ ಮತ, ಒಂದೇ ದೇವರು ಎಂದು ಸಾರಿ, ಅಸ್ಪೃಶ್ಯರ ಬಾಳಿಗೆ ನಂದಾ ದೀಪವಾಗಿ ಬೆಳಗಿದವರೇ ಬ್ರಹ್ಮ ಶ್ರೀ ನಾರಾಯಣ ಗುರುಗಳು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಲಿತರಿಗಾಗಿ ರಂಗರಾವ್‌ರವರು ಶಾಲೆಗಳನ್ನು ತೆರೆದ ದಿನಗಳಲ್ಲಿಯೇ ನೆರೆಯ ಕೇರಳ ಸಮಾಜದಲ್ಲಿ ನಾರಾಯಣ ಗುರುಗಳು ಅಲ್ಲಿನ ಅಸ್ಪೃಶ್ಯರಿಗೆ ಪ್ರತ್ಯೇಕ ದೇವಾಲಯಗಳನ್ನು ಸ್ಥಾಪಿಸುವ ಮೂಲಕ ಮಾನಸಿಕ ಧೈರ್ಯ ತುಂಬುವುದಕ್ಕೆ ಯತ್ನಿಸಿದರು. ರಂಗರಾವ್‌ರವರು ಹುಟ್ಟುವುದಕ್ಕಿಂತ 3 ವರ್ಷ ಮೊದಲು ನಾರಾಯಣ ಗುರುಗಳು ಹುಟ್ಟಿದರು.

ಕುದ್ಮುಲ್ ರಂಗರಾವ್ ಅವರು ಮಂಗಳೂರು, ಉಡುಪಿಯಲ್ಲಿ ದಲಿತರರಿಗಾಗಿ ಅನೇಕ ಸಂಸ್ಥೆಗಳನ್ನು ಆರಂಭಿಸಿ ನಡೆಸುತ್ತಿದ್ದ ದಿನಗಳಲ್ಲಿಯೇ ನಾರಾಯಣ ಗುರುಗಳು ಶೂದ್ರ ಸಮುದಾಯದ ಏಳಿಗೆಗಾಗಿ ಶ್ರಮಿಸುತ್ತಿದ್ದರು. ಈ ಸಲುವಾಗಿ 1903ರಲ್ಲಿ ನಾರಾಯಣ ಗುರುಗಳ ಕಾರ್ಯಕ್ಷೇತ್ರವಾದ ಶಿವಗಿರಿಯಲ್ಲಿ 'ಶ್ರೀ ನಾರಾಯಣ ಧರ್ಮ ಪಾಲನಾ ಯೋಗಂ' ಎಂಬ ಸಂಸ್ಥೆಯನ್ನು ಆರಂಭಿಸಿದ ಆರು ವರ್ಷಗಳ ನಂತರ ಅಸ್ತಿತ್ವಕ್ಕೆ ಬಂದ ಸಂಸ್ಥೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಲಿತರಷ್ಟೇ ಹಿಂದುಳಿದಿದ್ದು ಮೇಲು ಜಾತಿಯವರ ದೇವಾಲಯಗಳಿಗೆ ಪ್ರವೇಶ ಇಲ್ಲದ ಬಿಲ್ಲವರು – ತಮಗಾಗಿ ದೇವಾಲಯವೊಂದನ್ನು ಪ್ರತಿಷ್ಠಾಪಿಸಿ ಕೊಡುವಂತೆ ಶಿವಗಿರಿಗೆ ತೆರಳಿ ನಾರಾಯಣ ಗುರುಗಳನ್ನು ಪ್ರಾರ್ಥಿಸಿದಾಗ ಅದಕ್ಕೆ ಅವರು ಒಪ್ಪಿ ಮಂಗಳೂರಿಗೆ ಆಗಮಿಸಿದ್ದರು. ಅವರು ಮಂಗಳೂರಿಗೆ ಬಂದು ಕುದ್ರೋಳಿಯಲ್ಲಿ ಗೋಕರ್ಣನಾಥ ದೇವಾಲಯಕ್ಕೆ ಅಡಿಗಲ್ಲು ಹಾಕಿದ್ದು 1908ರಲ್ಲಿ. ಈ ವೇಳೆಗೆ ಡಿಸಿಎಂ ಸಂಸ್ಥೆಯ ಪಂಚಮರ ಶಾಲೆಗಳೂ ಇದ್ದವು.

1. ಅಖಿಲ ಭಾರತ ಮುಂಡಾಲ ಯುವ ವೇದಿಕೆ ಪ್ರಕಟಿಸಿದ ಕೃತಿ 'ಅಮೃತ ಬಿಂದು, ಪೂಜ್ಯನೀಯ ಕುದ್ಮುಲ್ ರಂಗರಾವ್, 2012, ಪುಟಗಳು – 37,38
2. ಬಾರ್ಕೂರು ಉದಯ, ಇತಿಹಾಸದ ಶೋಧ ಗತದ ಹುಡುಕಾಟ, ತುಳು ಸಂಸ್ಕೃತಿ ಚರಿತ್ರೆ ಕಥನ, ಆಕೃತಿ ಪ್ರಿಂಟರ್ಸ್, 2015 ಪುಟಗಳು, 236,237,238
3. ಲಕ್ಷ್ಮಣ್ ಕೊಡಸೆ, ದಲತ್ತೋದ್ಧಾರಕ ಗುರು ಕುದ್ಮುಲ್ ರಂಗರಾವ್, ಪ್ರಕಾಶಕರು ಕನ್ನಡ ಸಂಘ, ಕಾಂತವರ, 2015, ಪುಟಗಳು, 15
4. ಮೇಲಿನದೇ, ಪುಟ, 20
5. ಡಾ.ವಾಸುದೇವ ಬೆಳ್ಳೆ, ದಲಿತ ಸಂಕಥನ,2013 ಪುಟುಗಳು, 4,13
6. ಸಂವಿಧಾನ ಶಿಲ್ಪಿ ಬಾಬಾ ಸಾಹೇಬ್ ಅಂಬೇಡ್ಕರ್, ಡಾ.ಎಚ್.ವಿ.ಹಂದೆ, 2013, ಪುಟ, 47,48
7. 'ಅಸ್ಪೃಶ್ಯತೆ' ಮೋ.ಕ.ಗಾಂಧೀ ಅನುವಾಸಕರು, ಪ್ರೊ.ಜಿ.ಡಿ.ನಾಡಕರ್ಣಿ, ಪುಟ, 42

# ಅಧ್ಯಾಯ – 04

## ಸುಧಾರಣೆಗೊಂಡ ಪರಿಶಿಷ್ಟ ಸಮುದಾಯದ ಪ್ರಸ್ತುತ ಅವಲೋಕನ

- ➢ಜನಾಂಗ, ಪ್ರತಿಭೆ, ಸಾಹಿತ್ಯ, ಉದ್ಯೋಗ
- ➢ರಂಗರಾಯರ ಸ್ಮೃತಿ
- ➢ಸರ್ಕಾರ ರಚಿಸಿದ ಹೊಸ ಯೋಜನೆ
- ➢ಉಪಸಂಹಾರ

## ಸುಧಾರಣೆ ಗೊಂಡ ಪರಿಶಿಷ್ಟ ಸಮುದಾಯದ ಪ್ರಸುತ್ತ ಅವಲೋಕನ

ರಂಗರಾವ್‌ರವರ ಅಳವಿನ ನಂತರ ಕಂಡು ಬಂದ ಅಸ್ಪಶ್ಯರ ಸಾಮಾಜಿಕ ಬದುಕಿನ ಬದಲಾವಣೆ ಇತಿಹಾಸದಲ್ಲೇ ಒಂದು ಮೈಲಿಗಲ್ಲು. ವರ್ಣ ಜಾತಿಗಳ ಆಧಾರದಲ್ಲಿ ರೂಪಿತವಾದ ಶ್ರೇಣಿಕೃತ ಭಾರತೀಯ ಸಮಾಜದಲ್ಲಿ ದಲಿತರ ಸ್ವಂತಿಕೆಯ ಸ್ವಾಭಿಮಾನದ ಬದುಕನ್ನು ಹುಡುಕಾಡುವ ಪ್ರಯತ್ನಗಳು ನಡೆದಿದೆ. ಆಧುನಿಕ ಕಾಲಘಟ್ಟದಲ್ಲಿ 19ನೇ ಶತಮಾನದ ಉತ್ತರಾರ್ಧದಿಂದ ಹುಟ್ಟಿ ಬೆಳೆದು ಬಂದ ಬ್ರಾಹ್ಮಣೇತರ ದಲಿತ ಪರವಾದ ಜಾತಿ ವಿರೋಧಿ ಹೋರಾಟಗಳು ದಲಿತರ ಏಳಿಗೆಗಾಗಿ ಪ್ರಯತ್ನಿಸಿದ್ದಲ್ಲದೇ, ಜನಾಂಗೀಯ, ಸಾಂಸ್ಕೃತಿಕ ಸ್ವಂತಿಕೆಯ ವಿಚಾರಗಳನ್ನು ಚರ್ಚಿಸಿದವು.

ಪಾರಂಪರಿಕವಾಗಿ ಪ್ರಬಲವಾಗಿದ್ದ ಮೇಲ್ಜಾತಿಗಳು ಆಧುನಿಕ ಸಂಧರ್ಭದಲ್ಲೂ, ಶಿಕ್ಷಣ, ಅಧಿಕಾರಗಳನ್ನು ತಮ್ಮದನ್ನಾಗಿಸಿಕೊಂಡು, ಭಾರತವನ್ನು ಹಿಂದೂ ರಾಷ್ಟ್ರೀಯತೆಯ ನೆಲೆಯಲ್ಲಿ ನಿರೂಪಿಸಿ ತೊಡಗಿದಾಗ ಜ್ಯೋತಿಬಾಪುಲೆ, ಅಂಬೇಡ್ಕರ್ ಅದನ್ನು ವಿರೋಧಿಸಿದ್ದಲ್ಲದೇ, ಶೂದ್ರರ ರಾಷ್ಟೀಯತೆಯ ಕಲ್ಪನೆಯನ್ನು ಮುಂದಿಟ್ಟರು. ಜನಾಂಗ, ಭಾಷೆ, ಸಂಸ್ಕೃತಿ, ಪ್ರದೇಶಗಳ ಆಧಾರದಲ್ಲಿ ಮೇಲ್ಜಾತಿ ಹೋರಾಟಗಾರರು ಕಟ್ಟಿದ ವಿಚಾರಗಳನ್ನು ಬಲವಾಗಿ ವಿರೋಧಿಸಿದ ದಲಿತ ಹೋರಾಟಗಾರರು ನಡೆಸಿದ ಚಿಂತೆಗಳು ಭಾರತೀಯ ಸಂಧರ್ಭದಲ್ಲಿ ಬಹಳ ಮುಖ್ಯವಾದುದು.

ಶಿಕ್ಷಣ, ಸಾಮಾಜಕ ನ್ಯಾಯ, ಹಕ್ಕುಗಳ ಪ್ರತಿಪಾದನೆಗಳಿಂದ ದಲಿತರ ಏಳಿಗೆ ಸಾಧ್ಯ ಎನ್ನುವ ನಂಬಿಕೆಯೊಂದು ಬೆಳೆದು ಬಂದಿದೆ. ಆದರೆ ಇತ್ತೀಚೆಗೆ ಆಧುನಿಕ ಗೃಹೀತಗಳಿಂದ ರೂಪಿತವಾದ ದಲಿತ ಪರಿಕಲ್ಪನೆಗಳ ಬಗ್ಗೆ ಮರು ಅವಲೋಕನ ನಡೆಯುತ್ತಿದೆ.

ಈ ಅವಲೋಕನ ಆಧುನೀಕತೆಯಿಂದ ಕಟ್ಟಲ್ಪಟ್ಟ ಪ್ರಧಾನ- ಅಧೀನ ಕಲ್ಪನೆಗಳನ್ನು ವಿಮರ್ಶೆಗೆ ಒಳಪಡಿಸುತ್ತಿದೆ. ಆಧುನಿಕ ಕಾಲಘಟ್ಟದಲ್ಲಿ ರೂಪುಗೊಂಡ ಜ್ಞಾನ ಮೀಮಾಂಸೆ ನೆಲೆಗಳನ್ನೇ ವಿಮರ್ಶೆಗೊಡ್ಡುತ್ತಿರುವ ಇತ್ತೀಚಿನ ಸಾಮಾಜಿಕ ಚಿಂತೆಗಳು ದಲಿತ ಸಾಂಸ್ಕೃತಿಕ ಅಸ್ತಿತ್ವವನ್ನು ಭಿನ್ನ ರೀತಿಯಲ್ಲಿ ಹುಡುಕಾಡುವ ಪ್ರಯತ್ನವನ್ನೂ ನಡೆಸುತ್ತಿದೆ.

- <u>ಜನಾಂಗ, ಪ್ರತಿಭೆ, ಸಾಹಿತ್ಯ, ಉದ್ಯೋಗ</u>

ಪರಿಶಿಷ್ಟ ಸಮುದಾಯಗಳು ಹೆಚ್ಚಿನ ಪ್ರಗತಿಯನ್ನು ಕಂಡಿಲ್ಲ ಮತ್ತು ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸುತ್ತಿವೆ. ಕೆಲವರು ಸಣ್ಣ ಪುಟ್ಟ ಸರಕಾರಿ ಉದ್ಯೋಗಗಳಲ್ಲಿ ಇದ್ದಾರೆ ಇಲ್ಲಿ ಕೂಡಾ ನೌಕರ ಶಾಹಿಯಲ್ಲಿ ಈ ಸಮುದಾಯಗಳ ಜನರಿಗೆ ಸಿಕ್ಕಿದ್ದು ತೀರಾ ಕೆಳ ಹಂತದ ಉದ್ಯೋಗಗಳು. ಬಹಳ ಕಡಿಮೆ ಮಂದಿ ಶಿಕ್ಷಕ ಮತ್ತು ಬ್ಯಾಂಕ್ ಉದ್ಯೋಗಿಗಳದ್ದಾರೆ.

ದಕ್ಷಿಣ ಕನ್ನಡದಲ್ಲಿ ದಲಿತ ಪ್ರಜ್ಞೆ, ದಲಿತ ಸಾಹಿತ್ಯ ಮತ್ತು ಬರವಣಿಗೆ ಪ್ರಮುಖವಾಗಿ ಬೆಳೆಯದಿರುವುದಕ್ಕೆ ಇನ್ನೊಂದು ಮುಖ್ಯ ಕಾರಣವೆಂದರೆ, ಇಲ್ಲಿನ ದಲಿತ ಸಮುದಾಯಗಳು ಮೌಖಿಕ ಪರಂಪರೆಯನ್ನು ಹೊಂದಿರವಂಥವುಗಳು.[1] ಮೌಖಿಕ ಪರಂಪರೆಯ ಜನ ಸಮೂದಾಯಗಳು ಭಿನ್ನ ಭಿನ್ನವಾದ ಆಚರಣಾ ಕಸುಬುಗಳನ್ನು, ಕರಕುಶಲ ಕಸಬುಗಳನ್ನು ಚಾಕರಿ ಕೆಲಸಗಳನ್ನು ಮಾಡಿಕೊಂಡು ಬಂದಿರುವಂಥವು ಈ ಕಸಬುಗಳಿಗೆ ಸಂಬಂಧಿಸಿದ ಮೌಖಿಕ ಕಥೆಗಳು, ಹಾಡುಗಳು, 'ಸಾಹಿತ್ಯ'ವಾಗಿರದೇ ಅದು ಬದುಕನ್ನು ಬದುಕುವ, ಮುಂದುವರಿಸುವ ವಾಹಕಗಳಾಗಿರುತ್ತವೆ. ಅವು ಅವರ ಬದುಕೇ ಆಗಿರುತ್ತವೆ. ಈ ಬದುಕಿನಿಂದ, ಮನೋಸ್ಥಿತಿಯಿಂದ ಆಕ್ಷರಿಕ ಬದುಕಿಗೆ ಪಲ್ಲಟವಾಗುವುದು, ಹೊಂದಿಕೊಳ್ಳುವುದು ಮೌಖಿಕ ಸಮುದಾಯಗಳಿಗೆ ಅಥವಾ ಅನಕ್ಷರಸ್ಥ ಸಮುದಾಯಗಳಿಗೆ ಸುಲಭದ ಕೆಲಸವಲ್ಲ.

ಒಂದು ನಿರ್ದಿಷ್ಟ ಬದುಕಿನ ತಲೆತಲಾಂತರಗಳ ಮಾನಸಿಕ ತರಭೇತಿಯಿಂದ ಬಿಡಿಸಿಕೊಂಡು ಇನ್ನೊಂದು ಬದುಕಿಗೆ ಮತ್ತು ಅಲ್ಲಿಯ ವ್ಯವಹಾರಗಳಿಗೆ ಪಲ್ಲಟಗೊಳ್ಳುವಲ್ಲಿ ದಲಿತ ಸಮುದಾಯ ಸಹಜವಾಗಿಯೇ ಬಹಳ ಕಾಲವನ್ನು ತೆಗೆದು ಕೊಳ್ಳುತ್ತದೆ. ದಕ್ಷಿಣ ಕನ್ನಡದ ದಲಿತ ಸಮುದಾಯ ಶಿಕ್ಷಣದ ಅವಕಾಶಕ್ಕೆ ಅದರಲ್ಲೂ ಉನ್ನತ ಶಿಕ್ಷಣಕ್ಕೆ ತೆರೆದುಕೊಂಡದ್ದು ನಿಧಾನವಾಗಿ ಅದರಲ್ಲೂ ಅಕ್ಷರ ಪರಂಪರೆಯ ಶಿಕ್ಷಣ ಪಾಠ- ಪ್ರವಚನ, ಉಪನ್ಯಾಸ, ಸಾಹಿತ್ಯಗಳಿಗೆ ತಯಾರಾಗಲು ಈ ದಲಿತ ಸಮುದಾಯಗಳಿಗೆ ಕಾಲಾವಕಾಶ ಬೇಕಾಯಿತು. ಮಾತ್ರವಲ್ಲ. ಇಲ್ಲಿನ ಪ್ರಾದೇಶಿಕ ಭಾಷೆ ತುಳುವಾಗಿರುವುದರಿಂದ ಕನ್ನಡದಲ್ಲಿ ಕಾವ್ಯ ರಚಿಸುವುದು ಇನ್ನೊಂದು ತೊಡಗಿನ ಕೆಲಸ ಕನ್ನಡ ಕಲಿಯ ಭಾಷೆಯಾಗಿರುವ ಈ ಪ್ರದೇಶದ ದಲಿತ ಕಾವ್ಯ ಗ್ರಾಂಥಿಕ ಕನ್ನಡದಲ್ಲಿ ರಚನೆಯಾಗಿರುವುದನ್ನು ಗಮನಿಸಬಹುದು.

- ## ರಂಗರಾಯರ ಸ್ಮೃತಿ :

ರಂಗರಾವ್‌ರವರ ಚಿಂತನೆ ಹಾಗೂ ಅವರ ಕೈಗೊಂಡ ಅಸ್ಪೃಶ್ಯರ ನಿವಾಣೆ ಪ್ರಯತ್ನವು ಎಷ್ಟರ ಮಟ್ಟಿಗೆ ಪ್ರವರ್ಧಮಾನಕ್ಕೆ ಬಂದಿತ್ತು ಎಂದರೆ ಪರಿಶಿಷ್ಟ ಸಮುದಾಯದಲ್ಲಿ ಬಹಳ ವಿಶೇಷವಾಗಿ ರಂಗರಾವ್‌ರವನ್ನು ಪೂಜಿಸುವ ಜನಾಂಗ ಮುಂಡಾಲರು.[2] ಪ್ರಸ್ತುತ ಅವಲೋಕನವನ್ನು ಗಮನಿಸಿದಾಗ ಅನೇಕ ಮುಂಡಾಲರ ಮನೆ- ಮನೆಗಳಲ್ಲಿ ರಂಗರಾಯರ ಭಾವಚಿತ್ರವಿದ್ದು ಅದಕ್ಕೆ ಆರತಿ ಬೆಳಗುತ್ತಿರುವುದು ಕಂಡು ಬರುತ್ತದೆ. ರಂಗರಾವ್‌ರವ ಸನ್ಯಾಸ ದೀಕ್ಷೆಯ ನಂತರ ಅವರು 'ಈಶ್ವರಾನಂದ ಸ್ವಾಮಿ' ಎಂದೇ ಪ್ರಖ್ಯಾತಿ. ಇದಕ್ಕೆ ಪ್ರತಿಯಾಗಿ ಇವತ್ತಿಗೂ ಕೊಡಿಯಾಲ್‌ಬೈಲ್ ಜೈಲ್‌ರೋಡ್‌ನ ಗಣೇಶ್‌ರಾವ್ ರಸ್ತೆಯಲ್ಲಿ ಮತ್ತು ತೊಕ್ಕೊಟ್ಟುವಿನ ಪರಿಶಿಷ್ಟರ ಕಾಲನಿಯಲ್ಲಿ ಈಶ್ವರಾನಂದ ಭಜನಾ ಮಂಡಳ ಇರೋದು ಕಂಡು ಬರುತ್ತದೆ.



## ಜೈಲ್ ರೋಡ್‌ನಲ್ಲಿರುವ ಈಶ್ವರಾನಂದ ಭಜನಾ ಮಂಡಳಿ

ಆ ಮೂಲಕ ರಂಗರಾವ್‌ರವರ ಹೆಸರಿನ ಮಂಡಳಿ ಜೊತೆಗೆ ದೇವರ ಆರಾಧನಾ ಪರಿ ಈ ಜನರದ್ದು. ವಿಶೇಷವೇನೆಂದರೆ ಹೆಚ್ಚಿನದಾಗಿ ಪರಿಶಿಷ್ಟರಿಗೆ ಸಂಬಂಧಪಟ್ಟ ಭಜನಾ ಮಂದಿರಗಳಲ್ಲಿ ರಂಗರಾವ್‌ರವರ ಭಾವಚಿತ್ರವಿದ್ದು ದೇವರ ಆ ಪೂಜಾರಾಧನೆಯ ಸಂಧರ್ಭ, ರಂಗರಾಯರಿಗೂ ಆರತಿ ಬೆಳಗುತ್ತಿರುವುದು ಮತ್ತು ಇವತ್ತಿಗೂ ಅವರನ್ನು ದೇವರೆಂದು ಪೂಜಿಸುತ್ತಿರುವುದು ಗಮನಿಸ ಬೇಕಾದಂತಹ ವಿಚಾರ. ಬಾಬುಗುಡ್ಡೆಯಲ್ಲಿ ರಂಗರಾವ್‌ರವರು ನಿರ್ಮಿಸಿದ ಶಾಲೆಯೊಂದರಲ್ಲಿ ಕಲಿತ ೮೦ ರ ಹರೆಯದ ಶ್ಯಾಮ್ ಕರ್ಕೇರರವರು, ಅವರ ತಂದೆಯ ಕಾಲದಲ್ಲಿದ್ದ ರಂಗರಾಯರು ನಮ್ಮ ಹಿರಿಯರಿಗೆ ದೇವರಾಗಿದ್ದರು ಎಂದು ತಿಳಿಸಿದ್ದಾರೆ.

ಶಾಲಾ ಕಟ್ಟಡಗಳು ಇವತ್ತಿಗೂ ನೆಲೆ ನಿಂತಿದ್ದು, ಇದರಲ್ಲಿ ಅಂಗನವಾಡಿ ಶಾಲೆ ಮಾತ್ರ ಪ್ರಗತಿಯಲ್ಲಿವೆ. ಸಾಮಾನ್ಯವಾಗಿ ಈ ಪರಿಶಿಷ್ಟರ ಅನೇಕ ಕಾಲನಿಗಳು ದೊಡ್ಡ-ದೊಡ್ಡ ಚರಂಡಿಗಳು

ಹಾದು ಹೋಗುವ ಬದಿಯಲ್ಲೇ ಕಂಡು ಬರುತ್ತವೆ. ಚರಂಡಿ ನೀರಿನ ವಾಸನೆಗಳು ವಿಪರೀತವಿರುವುದರಿಂದ ಮೂಗು ಮುಚ್ಚಿಕೊಂಡು ಹೋಗುವಂತಹ ಪರಿಸ್ಥಿತಿ. ಅನೇಕ ಕ್ರಿಮಿ ಕೀಟಾಣುಗಳಿಂದ ರೋಗ ರುಜಿನಗಳಿಗೆ ತುತ್ತಾದ ಜನರು. ಮಂಗಳೂರು ನಗರದಲ್ಲಿಯೇ ಇಂತಹ ಪ್ರದೇಶದಲ್ಲಿ ವಾಸವಾಗುತ್ತಿರುವ ಜನರು ಸಾಮಾಜಿಕ ನೆಲೆಗಟ್ಟಿನಲ್ಲಿ, ಮೂಲೆ ಗುಂಪಾಗಿರುವುದು ಮತ್ತು ಮೇಲ್ವರ್ಗಗಳು ಇಂತಹ ಸ್ಥಳಗಳಲ್ಲಿ ವಾಸವಾಗಲು ಹಿಂದೇಟು ಹಾಕಿರೋದು ಕೂಡಾ ಕಂಡು ಬರುತ್ತದೆ. ರಂಗರಾಯರು ನಿರ್ಮಿಸಿದ್ದ ಡಿ.ಸಿ.ಎಂ ಸಂಸ್ಥೆಯು ಸಂಪೂರ್ಣ ನಶಿಸಿ ಹೋಗಿದ್ದು, ಪ್ರಸ್ತುತ ಈ ಸ್ಥಳದಲ್ಲಿ ಕುದ್ಮುಲ್ ರಂಗರಾವ್ ಹೆಣ್ಣು ಮಕ್ಕಳ ಹಾಸ್ಟೆಲ್‌ಗಳಿದ್ದು. ಕರ್ನಾಟಕದ ಮೂಲೆ – ಮೂಲೆಗಳಿಂದ ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ತಮ್ಮ ವಿಧ್ಯಾಭ್ಯಾಸಕ್ಕಾಗಿ ದಕ್ಷಿಣ ಕನ್ನಡಕ್ಕೆ ಈ ಹಾಸ್ಟೆಲ್‌ಗೆ ಬರುತ್ತಾರೆ.




ಕುದ್ಮುಲ್ ರಂಗರಾಯರ ವಿದ್ಯಾರ್ಥಿ ನಿಲಯ

ಸುಮಾರು ೩೦೦ ವಿಧ್ಯಾರ್ಥಿಗಳು ಹೊಂದುವ ಹಾಸ್ಟೇಲ್ ಆಗಿದ್ದು, ಮಂಗಳೂರು ನಗರದ ಪಿ.ವಿ.ಎಸ್. ಸರ್ಕಲ್‌ನ ಹತ್ತಿರ ಕೆ.ಆರ್.ರಾವ್. ರಸ್ತೆ ಅಂದರೆ ಈಗಿನ ಪಿ.ವಿ.ಎಸ್.ನಿಂದ ಬಂಟ್ಸ್‌ಹಾಸ್ಟೆಲ್ ವರೆಗಿನ ರಸ್ತೆಯಾಗಿದ್ದು ಕುದ್ಮುಲ್ ರಂಗರಾವ್‌ರವರ ಹೆಸರಿದೆ.

ದಡ್ಡಲ್‌ಕಾಡ್‌ನಲ್ಲಿ ರಂಗರಾಯರು ಸ್ಥಾಪಿಸಿದ ಶಾಲೆಯೂ ಕೂಡಾ ಸಂಪೂರ್ಣ ಶಿಥಿಲಾವಸ್ಥೆಗೆ ಬಂದಿರೋದು ಕಂಡು ಬರುತ್ತದೆ.[3] ಈ ಶಾಲೆಯ ಕಟ್ಟಡದ ಕೆಲವೇ ಭಾಗಗಳು ಉಳಿದಿದ್ದು, ಇದರ ಮುಂಭಾಗದಲ್ಲಿ ಮುಂಡಾಲರು ಆರಾಧಿಸವಂತಹ ಬಬ್ಬು ಸ್ವಾಮಿ ದೈವದ ಕ್ಷೇತ್ರವಿದೆ.



## ಶಿಥಿಲಗೊಂಡ ರಂಗರಾಯರ ದಡ್ಡಲ್‌ಕಾಡ್‌ನ ಶಾಲೆ

ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನೇಕ ಪ್ರತಿಭೆ ಉಳ್ಳವರು ಪರಿಶಿಷ್ಟರು. ಆದರೆ ಸಮಾಜದಲ್ಲಿ ಸರಿಯಾಗಿ ಒಂದು ವೇದಿಕೆ ಇಲ್ಲದಿರುವುದೇ ಅವರ ಪ್ರತಿಭೆಯು ಮರೆ ಮಾಚಲು ಕಾರಣ. ರಂಗರಾಯರು ಕೂಡಾ ಅವರ ಕಾಲದಲ್ಲಿ ವಿಶೇಷವಾಗಿ ಇವರ ಪ್ರತಿಭೆಗೆ ಪೋಷಕರಾಗಿ ಅವರಿಗೆ

ವೇದಿಕೆ ಸಿದ್ಧ ಗೊಳಿಸುತ್ತಿದ್ದರು. ಇವತ್ತಿಗೂ ಕಾಪಿಕಾಡ್, ಉರ್ವ ತೊಕ್ಕೊಟ್ಟಿನಲ್ಲಿ ರಂಗರಾವ್‌ರವರ ಹೆಸರಿನ ಭವನವಿದ್ದು ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವುದನ್ನು ಗಮನಿಸಬಹುದು.

- **ಸರ್ಕಾರ ರಚಿಸಿದ ಹೊಸ ಯೋಜನೆ**

ಮಂಗಳೂರಿನಲ್ಲಿ ರಂಗರಯರ ಹೆಚ್ಚಿನ ಪ್ರಭಾವಕ್ಕೆ ಒಳಗಾದವರು ಪರಿಶಿಷ್ಟರ ಜಾತಿಯ ಮುಂಡಾಲರು. 'ಅಖಿಲ ಭಾರತ' ಮುಂಡಾಲಯುವ ವೇದಿಕೆಯು ಕಳೆದ ಹಲವಾರು ವರ್ಷಗಳಿಂದ ರಂಗರಾಯರ ಜಯಂತಿಯನ್ನು ವಿಜೃಂಭಣೆಯಿಂದ ಮಾಡಿಕೊಂಡು ಬರುತ್ತಿದ್ದು.[4] 2014 ರ ಇವರ ವಿಶೇಷ ಮನವಿಗೆ ಸ್ಪಂದಿಸಿದ ಸರ್ಕಾರ ಜಿಲ್ಲಾಡಳಿತದಿಂದ ಆಚರಿಸಿತು. ಪ್ರಸ್ತುತ ರಂಗ ರಾಯರ ಜಯಂತಿಯು ಒಂದು ಸರ್ಕಾರದ ಕಾರ್ಯ ಕ್ರಮವಾಗಿ ಇತಿಹಾಸದ ಪುಟಕ್ಕೆ ಸೇರಿ ಕೊಂಡಿದೆ. ಮಾತ್ರವಲ್ಲ 2016 ರ ಸಾಲಿನ ಸರ್ಕಾರದ ಅನುದಾನದಿಂದ 2 ಕೋಟಿ ರೂಪಾಯಿ ವೆಚ್ಚದಲ್ಲಿ ರಂಗರಾಯರ ಭವನವನ್ನು ನಿರ್ಮಿಸಲು ಈಗಾಗಲೇ ಮಂಜೂರಾತಿ ದೊರಕಿದ್ದು, ಈ ಭವನವು ನಿರ್ಮಾಣ ಹಂತದಲ್ಲಿದೆ. ಮಂಗಳೂರು ಮಹಾನಗರ ಪಾಲಿಕೆಯು ಕೂಡ ಮಂಗಳೂರು ಪುರಭವನಕ್ಕೆ ರಂಗರಾವ್‌ರವರ ಹೆಸರಿಡಲು ಪ್ರಸ್ತಾವನೆ ಸಲ್ಲಿಸಿದೆ.

ರಂಗರಾಯರ ಸೇವಾ ಮನೋಭಾವ ಮತ್ತು ಅವರು ಅಸ್ಪೃಶ್ಯರ ಶಿಕ್ಷಣಕ್ಕಾಗಿ ದುಡಿದ ಕಾಯಕವನ್ನು ಕಂಡು ಸ್ವತಃ ಈ ದೇಶದ ಮಹಾತ್ಮ ಗಾಂಧೀಜಿಯವರೇ ಶರಣಾಗಿದ್ದು,[5] ಪ್ರಸ್ತುತ ರಾಜ್ಯದ ಪ್ರಥಮ ಪಿ.ಯು.ಸಿಯ ಕನ್ನಡ ಪಠ್ಯ ಪುಸ್ತಕದಲ್ಲಿ 'ಮಹಾತ್ಮರ ಗುರು' ಎಂಬ ಒಂದು ಅಧ್ಯಾಯವಿದ್ದು ಇದು ರಂಗರಾಯರ ಕೈಂಕರ್ಯಕ್ಕೆ ಲಭಿಸಿದ ಗೌರವ.

ಅವರ ಸಮಾಧಿಯ ಸ್ಥಳವು ಬ್ರಹ್ಮ ಸಮಾಜಕ್ಕೆ ಸೇರಿದ್ದು ಇವತ್ತಿಗೂ ಸಮಾಧಿಯು ಸರಿಯಾದ ಅಭಿವೃದ್ಧಿ ಕಾಣದಿರೋದು ವಿಷಾದನೀಯ. ಸಮಾಧಿಯ ಸ್ಥಳದಲ್ಲಿ ಅನೈತಿಕ ಚಟುವಟಿಕೆಗಳು ನಡೆಯುತ್ತಿದೆ. ಪ್ರಸ್ತುತ ಸರ್ಕಾರ ಈ ಸಮಾಧಿಯನ್ನು ಅಭಿವೃದ್ಧಿ ಪಡಿಸಲು ಮುಂದಾಗಿದ್ದು. ಇದಕ್ಕೆ

ಕಾಯಕಲ್ಪವೂ ಕೂಡಾ ಸಿಕ್ಕಿದೆ. ಸಮಾಧಿಯು ಸುಂದರವಾಗಿ ರೂಪುಗೊಂಡು ಅಲ್ಲಿ ಧ್ಯಾನ ಮಂದಿರವಾಗಲಿ ಎಂದು ಎಲ್ಲಾ ಪರಿಶಿಷ್ಟರ ದೀನ ದಲಿತರ ಆಶಯವಾಗಿದೆ.

1. ವಾಸುದೇವ ಬೆಳ್ಳಿ, ದಲಿತ ಸಂಕಥನ, 2013, ಪುಟ.32
2. ಶ್ಯಾಮ್ ಕರ್ಕೇರವರಿಂದ ಜೂನ್ ತಿಂಗಳ 18-06-2016 ರಂದು ಸಂಜೆ 4.00 ಗಂಟೆಯ ಸುಮಾರಿಗೆ ಪಡೆದುಕೊಂಡ ಮಾಹಿತಿ
3. ಅಂಬಿಕಾ, ನಿಲಯ ಪಾಲಕರು, ಕುದ್ಮಲ್ ರಂಗರಾವ್ ವಿದ್ಯಾರ್ಥಿನಿಲಯ ಕೊಡಿಯಲ್‌ಬೈಲ್ ಇವರಿಂದ ದಿನಾಂಕ 03-07-2016 ರ ಮಧ್ಯಾಹ್ನ 2.00 ಗಂಟೆಯ ಸುಮಾರಿಗೆ ಪಡೆದುಕೊಂಡ ಮಾಹಿತಿ
4. ಕಿರಣ್ ಕುಮಾರ್, ಅಧ್ಯಕ್ಷರು, ಅಖಿಲ ಭಾರತ ಮುಂಡಾಲ ಯುವ ವೇದಿಕೆ ಇವರಿಂದ ಎಪ್ರಿಲ್ ತಿಂಗಳನಲ್ಲಿ ಪಡೆದ ಮಾಹಿತಿ
5. ಯಶವಂತ್ ಕುದ್ರೋಳಿ, ಉಪನ್ಯಾಸಕರು, ಶ್ರೀದೇವಿ ಕಾಲೇಜು, ಮಂಗಳೂರು ಇವರಿಂದ ಎಪ್ರಿಲ್ ತಿಂಗಳನಲ್ಲಿ ಪಡೆದ ಮಾಹಿತಿ

## ಉಪ ಸಂಹಾರ

ಇವತ್ತಿನ ಚಾರಿತ್ರಿಕ ಸಂಧರ್ಭದಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ ಪ್ರತಿನಿಧೀಕರಣವು ದಲಿತ ಜಾತಿಗಳ ಅಸಮಾನ ಸಂಬಂಧಗಳನ್ನು ಮರೆಸಿ ಬಿಡುತ್ತದೆ ಎನ್ನುವ ವಿಷಯಕ್ಕಿಂತ, ಇತ್ತೀಚಿನ ದಶಕಗಳಲ್ಲಿ ಚಿಂತಕ ವರ್ಗ ನಿರೂಪಿಸಿದ ದಲಿತ ಪರಿಕಲ್ಪನೆ ಮತ್ತು ಪ್ರತಿನಿದೀಕರಣದ ಚಿಂತನೆಗಳ ಚರ್ಚೆ ಮುಖ್ಯವಾದುದು. ಒಂದು ದೃಷ್ಟಿಯಲ್ಲಿ ದಲಿತ ಜಾತಿಗಳ ಅಸಮಾನ ಸಂಬಂಧಗಳನ್ನು ಮತ್ತು ಪ್ರಗತಿಯ ಏರಿಳಿತಗಳನ್ನು ಅರಿಯಲು ಆ ಕುರಿತು ಅಂಕಿ ಅಂಶಗಳ ತಿಳುವಳಿಕೆ ಪಡೆಯುವುದು ಮುಖ್ಯವಾದುದು. ರಂಗರಾಯರ ಆದರ್ಶಗಳನ್ನು ಅವರ ಕೈಗೊಂಡ ಅಸ್ಪೃಶ್ಯರ ಅಭ್ಯುದಯ ಕಾರ್ಯಗಳ ಮರು ಚಿಂತನೆಯ ಅವಶ್ಯಕತೆಯಿದೆ. ಆ ಮೂಲಕ ಸಮಾಜದ ಏಳಿಗೆಯ ಪ್ರಗತಿಗೆ ಕೈ ಜೋಡಿಸುವ ಪ್ರಗತಿ ಪರ ಚಿಂತನೆಯ ಅಗತ್ಯತೆ ಮತ್ತು ಅವಶ್ಯಕ.

ದಲಿತ ಐಕ್ಯತೆಗಾಗಿಯೂ ಒಳಗಿನ ಈ ಗೊಂದಲಗಳನ್ನು ನಿವಾರಿಸಿಕೊಳ್ಳುವುದು ಅಗತ್ಯವಾದುದು ಹಾಗೆ ನೋಡಿದರೆ ಇಂದು ಕೂಡಾ ಅತ್ಯಂತ ಕೆಳಸ್ತರದ ಅಸ್ಪ್ರಶ್ಯ ಸಮುದಾಯಗಳಿಗೆ ಆಧುನಿಕ ಅವಕಾಶಗಳು ತಲುಪಲಿಲ್ಲ ಎಂದೇ ಹೇಳಬಹುದು. ಆದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳೆನ್ನುವ ರಾಷ್ಟ್ರ ಪ್ರಭುತ್ವದ ಅಡಿಯಲ್ಲಿ ಆದ ಸಾಮಾಜಿಕ ಆರ್ಥಿಕ – ರಾಜಕೀಯ ಪ್ರತಿನಿಧೀಕರಣ ದಲಿತ ಸಮುದಾಯಗಳ ಗುರುತುಗಳನ್ನು ಮರೆಮಾಚಿ ಬಿಡುತ್ತದೆ ಎನ್ನುವ ವಿಚಾರ ಕುರಿತು ಅಧ್ಯಯನ ಸಮಸ್ಯಾತ್ಮಕವಾದುದು. ದಲಿತ ಪರಿಕಲ್ಪನೆಯನ್ನು ಜಾತಿ ಹಾಗೂ ವರ್ಗ ಈ ಎರಡೂ ಆಯಾಮಗಳಲ್ಲಿ ಪರಿಕಲ್ಪಿಸಲಾಗಿದೆ.

ರಂಗರಾಯರ ಪ್ರತಿಯೊಂದು ಅಸ್ಪೃಶ್ಯತಾ ನಿವಾರಣೆಯ ಪ್ರಯತ್ನಗಳಲ್ಲೂ ಅಭಿವೃಧ್ಧಿ ಪರ ಫಲಿತಾಂಶಗಳೇ ಹೆಚ್ಚಿವೆ, ಅವರು ಬ್ರಾಹ್ಮಣ ಸಂಸ್ಕೃತಿಗೆ ಒತ್ತು ಕೊಟ್ಟು ಭಜನಾ ಸಂಕೀರ್ತನೆಗೆ ಮತ್ತು ಮಂದಿರದ ನಿರ್ಮಾಣಕ್ಕೆ ಮುಂದಾದರೆ ಎಂಬ ಪ್ರಶ್ನೆ ಇದೆ? ಆದರೆ ಪ್ರಸ್ತುತ ಅವಲೋಕನವನ್ನು ಗಮನಿಸಿದಾಗ ಇವರು ಕಲಿಸಿದ ಭಜನಾ ಕೀರ್ತನೆಯಿಂದ ಮುಂದಿನ ಪೀಳಿಗೆಯೂ ಅದನ್ನು

ಮುಂದುವರಿಸಿಕೊಂಡು ಬಂದಿತು. ಇಂತಹ ಭಜನಾ ಕೀರ್ತನೆಗಳನ್ನು ಹಾಡಿ ತಮ್ಮ ಕಂಠ ಸಿರಿಯನ್ನು ವೃದ್ಧಿಸಿಕೊಂಡು ಇವತ್ತು ದಕ್ಷಿಣ ಕನ್ನಡದ ಸಂಗೀತ ಕ್ಷೇತ್ರದಲ್ಲೇ ಅತ್ಯುನ್ನತ ಮಟ್ಟದಲ್ಲಿರುವ ದಿ॥ ಚಂದ್ರಕಾತ್ ಮತ್ತು ಆಕಾಶವಾಣಿ ಕಲಾವಿದ ಹಿಂದೂಸ್ಥಾನಿ ಗಾಯಕರಾದ ಉತ್ತಮ್ ಕುಮಾರ್ ಕೊಡಿಯಾಲ್‌ಬೈಲ್‌ರವರು ಸೇರಿ ಕೊಂಡಿದ್ದಾರೆ. ಆಧುನಿಕೋತ್ತರ ಹಾಗೂ ದಲಿತ ವಿಚಾರತೆಯನ್ನು, ದಲಿತ ಸಂಸ್ಕೃತಿಯನ್ನು ಸ್ವಾಭಿಮಾನದ ನೆಲೆಗಳಲ್ಲಿ ಅರ್ಥೈಸಲಾಗಿದೆ. ಜಾಗತೀಕರಣದ ಸಂಧರ್ಭದಲ್ಲಿ ದಲಿತ ಸಮಸ್ಯೆಗಳನ್ನು ಕುರಿತು ಚಿಂತನೆಗಳು ಇನ್ನೂ ಸಂಕೀರ್ಣ ಆಯಾಮವನ್ನು ಪಡೆದುಕೊಳ್ಳುತ್ತಿರುವುದನ್ನು ಗಮನಿಸಬಹುದು. ಜಾಗತೀಕರಣ ಉಂಟು ಮಾಡುವ ಬದಲಾವಣೆಗಳಿಂದ ಆಧುನಿಕ ಕಾಲದ ಸನ್ನಿವೇಶವು ಇವತ್ತಿನ ಸಂಧರ್ಭದಲ್ಲಿ ಇಲ್ಲ. ದಲಿತರ, ಶೋಷಿತರ, ಬಡವರ ಸಮಸ್ಯೆಗಳನ್ನು ರಾಷ್ಟ್ರ ಪ್ರಭುತ್ವದ ಜೊತೆಗಿನ ಹೋರಾಟದಲ್ಲಿ ಪರಿಹರಿಸಿಕೊಳ್ಳಬಹುದೆಂಬ ಕಲ್ಪನೆ ಅಸಂಬದ್ಧವಾಗುತ್ತಿದೆ. ಅಸ್ಪೃಶ್ಯರ ಸಾಂಸ್ಕೃತಿಕ ಚಿಂತನೆಗಳು ಮತ್ತು ಚಳುವಳಿಗಳು ಸಮಸ್ಯಾತ್ಮಕವಾದುದು ಜೊತೆಗೆ ಆಧುನಿಕ ಪ್ರಗತಿ ಕಾರ್ಯ ಕ್ರಮಗಳು ಮತ್ತು ಮೀಸಲಾತಿಯ ಸಮರ್ಪಕ ಬಳಕೆ ಆಗದಿರುವುದು ವ್ಯಕ್ತವಾಗುತ್ತದೆ. ಸಮುದಾಯಗಳ ಜನರು ಅನ್ನ, ಶಿಕ್ಷಣ ಉದ್ಯೋಗದ ನಿರೀಕ್ಷೆಯಲ್ಲಿರುವಾಗ ಚರ್ಚೆ ಸಾಮಾಜಿಕ – ಆರ್ಥಿಕ ಸಂಗತಿಗಳಿಗೆ ಒತ್ತು ಕೊಟ್ಟು ನಡೆಯ ಬೇಕಾಗುತ್ತದೆ.

ಈ ಸಂಶೋಧನೆ ಕೊನೆಯಲ್ಲಿ ದಕ್ಷಿಣ ಕನ್ನಡದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪಂಗಡದ ಸುಧಾರಣೆಯಾಗಿದೆಯೇ ಅಥವಾ ಇಲ್ಲವೇ ಎಂಬುವುದು ಪ್ರಶ್ನೆಯಾಗಿದೆ? ಪ್ರಸ್ತುತ ಅವಲೋಕನವನ್ನು ನಾವು ಗಮನಿಸಿದಾಗ ದಕ್ಷಿಣ ಕನ್ನಡದಲ್ಲಿ ಅನೇಕರು ಶಿಕ್ಷಿತರಾಗಿದ್ದಾರೆ, ಇಂಥವರಲ್ಲಿ ಎಷ್ಟು ಮಂದಿ ದಲಿತ ಸಮಾಜದ ಉನ್ನತಿಗೆ ಶ್ರಮಿಸಿದ್ದಾರೆ ಎಂದರೆ ಅದು ಬಹಳ ವಿರಳ ಎಂಬುವುದು ಸಮುದಾಯದ ಅನೇಕರ ಅಭಿಪ್ರಾಯ.ಎಲ್ಲೋ ಒಂದು ಕಡೆ ಪರ ಜಾತಿಯಿಂದ, ಪರ ಧರ್ಮದಿಂದ ಸಿಗುವ ಪೋಷಣೆಯೂ ಕೂಡ ಈ ದಲಿತ ಶಿಕ್ಷಿತರಲ್ಲಿ ಸಿಗದಿರೋದು ವಿಷಾದನೀಯ ಎಂದು, ಈ ಸಮುದಾಯಕ್ಕೆ ಸೇರಿದ ಶ್ಯಾಮ್ ಕರ್ಕೇರ,ಯಶವಂತ್ ಕುದ್ರೋಳಿ, ಉತ್ತಮ್

ಕುಮಾರ್ ಹೀಗೆ ಅನೇಕರು ತಿಳಿದ್ದಾರೆ.ಇಂತಹ ಶಿಕ್ಷಿತರಾದ ದಲಿತರು ಸರ್ಕಾರಿ ಅಥವಾ ಖಾಸಗಿ ಸೇವೆಯ ಹುದ್ದೆಯಲ್ಲಿ ಮೀಸಲಾತಿಯಲ್ಲಿ ಉನ್ನತ ಸ್ಥಾನಮಾನ ಅಲಂಕರಿಸಿ ಸಮಾಜದ ಮುಖ್ಯವಾಹಿನಿಯಲ್ಲಿ ನಾನೊಬ್ಬ ದಲಿತ ಎಂದು ಕೆಲವು ಸಂದರ್ಭದಲ್ಲಿ ಹೇಳಿ ಕೊಳ್ಳಲು ಹಿಂಜರಿಯುವುದು ಕಂಡು ಬರುತ್ತದೆ.ಈ ಪ್ರಸಂಗಗಳೆಲ್ಲ ಆಗಲೂ ಕಾರಣ ಒಂದು ರೀತಿಯಲ್ಲಿ ತಿಳಿಸುವುದಾದರೆ, ಎಲ್ಲಿ ತಾನು ದಲಿತನೆಂದು ಗೊತ್ತಾದಲ್ಲಿ ನನಗೆ ಸಿಗುವ ಘನತೆ,ಗೌರವ ಕಡಿಮೆಯಾಗ ಬಹುದೆಂದಲ್ಲಿ ಆ ಹಿಂಜರಿಕೆಯ ಮನೋಭಾವವಿರ ಬಹುದು. ಮಾತ್ರವಲ್ಲ ಬೆಳೆಯುವ ಯುವಕರಿಗೆ ತಮ್ಮ ಸಮುದಾಯದಿಂದಲೇ ಸಿಗುವ ಮಾಹಿತಿ ಕೊರೆತೆಯೂ ಕಾರಣ ಎಂಬುವುದೂ ಅರ್ಥವಾಗುತ್ತವೆ. ಹೀಗೆ ಅನೇಕ ಕೃತಿಗಳ ಅಧ್ಯಯನ ಕೂಡಿ ಹಿರಿಯರ ಅಭಿಪ್ರಾಯ ಸಂಗ್ರಹಣೆಯೊಂದಿಗೆ ಈ ಸಂಶೋಧನೆಯನ್ನು ಸ್ವ-ಪ್ರಯತ್ನದೊಂದಿಗೆ ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ. ರಂಗ ರಾಯರ ಸಮಾಜ ಮುಖಿ ಕಾಯಕಗಳ ಒಳಗೊಂಡ ಪ್ರಸ್ತುತ ಅವಲೋಕನದ ಕಡೆಗೆ ಗಮನ ಹರಿಸಿದ ಸಂಧರ್ಭದಲ್ಲಿ ದಕ್ಷಿಣ ಕನ್ನಡದಲ್ಲಿರುವ ದಲಿತರ ಆರ್ಥಿಕ ವ್ಯವಸ್ಥೆ ಮತ್ತು ಅವರ ಸುಧಾರಣೆಗೊಂಡ ಸಾಮಾಜಿಕ ಬದುಕಿನ ಬಗ್ಗೆ, ತಿಳಿಸಲಾಗಿದೆ.ಪ್ರಸ್ತುತ ಇವರ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿ ಸುಧಾರಣೆಯಾಗಿದ್ದು, ಈ ಸಮಾಜದ ಉನ್ನತಿಯು ಶಿಕ್ಷಿತ ಮತ್ತು ವೃತ್ತಿ ನಿರತರಾಗಿರುವ ಜನರು ತಮ್ಮ ಮುಂದಿನ ಪೀಳಿಗೆಯನ್ನು ಶೈಕ್ಷಣಿಕವಾಗಿ ಮತ್ತಷ್ಟು ಗಟ್ಟಿಗೊಳಿಸುವ ಅವಶ್ಯಕತೆ ಬಹಳಷ್ಟು ಇದೆ ಎಂದು ಹೇಳಬಹುದು.

# ಪರಾಮರ್ಶನ ಗ್ರಂಥಗಳು


- ದಲಿತೋದ್ಧಾರಕ ಕುದ್ಮುಲ್ ರಂಗರಾವ್ –ಪಿ. ಕಮಲಾಕ್ಷ
- ಲಕ್ಷ್ಮಣ್ ಕೊಡಸೆ, ದಲಿತೋದ್ಧಾರಕ ಗುರು ಕುದ್ಮುಲ್ ರಂಗರಾವ್,2015
- ಅಖಿಲ ಭಾರತ ಮುಂಡಾಲ ಯುವ ವೇದಿಕೆ ಪ್ರಕಟಿಸಿದ ಕೃತಿ 'ಅಮೃತ ಬಿಂದು, 2012
- ಇತಿಹಾಸದ ಶೋಧ ಗತದ ಹುಡುಕಾಟ –ಬಾರ್ಕೂರು ಉದಯ, 2015
- ಡೆನಿಟ ಉಷಾಪ್ರಭಾ ಮಣಿಪಲ ವಿಶ್ವವಿಧ್ಯಾಲಯದ ಗ್ರಾಮೀಣ ಅಧ್ಯಯನ ಕೇಂದ್ರಕ್ಕೆ ಸಲ್ಲಿಸಿದ ಸಂಶೋಧನ ಪ್ರಬಂಧ, 2012
- ಶ್ರೀ ನಾರಾಯಣ ಗುರು ವಿಜಯದರ್ಶನಂ –ಬಾಬು ಶಿವಪೂಜಾರಿ, 2008
- ಸಂಬಿಧಾನ ಶಿಲ್ಪಿ ಬಾಬಾ ಸಾಹೇಬ್ ಅಂಬೇಡ್ಕರ್ –ಡಾ.ಎಚ್.ವಿ.ಹಂದೆ, 2013
- 'ಅಸ್ಪೃಶ್ಯತೆ' ಮೋ.ಕ.ಗಾಂಧೀ ಅನುವಾದಕರು –ಪ್ರೊ.ಜಿ.ಡಿ. ನಾಡಕರ್ಣಿ
- ದಲಿತ ಸಂಕಥನ –ಡಾ.ವಾಸುದೇವ ಬೆಳ್ಳೆ,2013
- ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನ ಸಾಮಾಜಿಕ ಇತಿಹಾಸ
  – ಪಿ.ಕಮಲಾಕ್ಷ, 1994
- ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು –ಪ್ರೊ.ಲಕ್ಷ್ಮಣ್ ತೆಲಗಾವಿ
- ದಲಿತರು ಮತ್ತು ಜಾಗತೀಕರಣ –ಮೊಗುಳ್ಳಿ ಗಣೇಶ
- ಪ್ರಾಚೀನ ಭಾರತದ ಶೂದ್ರರು –ಆರ್.ಎಸ್. ಶರ್ಮ
- ದಕ್ಷಿಣ ಕನ್ನಡದ ಇತಿಹಾಸ –ಕೇಶವ ಕುಡ್ವ ಕಾರ್ಕಳ, 1948
- ನಾವಡ ಎ.ವಿ. –ಕೊರಗರು, ಕರ್ನಾಟಕ ಬುಡಕಟ್ಟುಗಳು ಸಂಪುಟ 1
- ಸ್ರೀ ಬಬ್ಬುಸ್ವಾಮಿ ಚರಿತಾಮೃತ ಜನಪದ ಕಾದಂಬರಿ – ಬಿ. ಮೋಹನ್ ಕಣ್ಣೂರು,
- ಕಾರನಿಕದ ಸತ್ಯೊಲು –ನವೀನ್ ಸುವರ್ಣ ಪಡ್ರೆ

